KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ಜುಲೈ ೨೪, ೨೦೦೮ (ಶ್ರಾವಣ ೨, ಶಕ ವರ್ಷ ೧೯೩೦) | ಸಂಚಿಕೆ ३೦ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಉನ್ನತ ಶಿಕ್ಷಣ ಸಚಿವಾಲಯ**

**ವಿಷಯ :** 2007–08ನೇ ಶೈಕ್ಷಣಿಕ ಸಾಲಿಗೆ ಶಿವಮೊಗ್ಗ ಜಿಲ್ಲೆ ಸಾಗರದ ಸಾಗರ ಗಂಗೋತ್ರಿ ಶಿಕ್ಷಣ ಮಹಾವಿದ್ಯಾಲಯದ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಕುರಿತು.

**ಉಲ್ಲೇಖ :** 1. ಕರ್ನಾಟಕ ಸರ್ಕಾರದ ನಡವಳಿ ಸಂಖ್ಯೆ: ಇಡಿ 458 ಯುಆರ್‌ಸಿ 2004, ದಿ: 30–3–2005.
2. ಎನ್.ಸಿ.ಟಿ.ಇ. ಪತ್ರ ಸಂಖ್ಯೆ: F.SRO/NCTE/B.Ed./2006-07/2470, ದಿನಾಂಕ 11–5–2007.
3. ಸಂಸ್ಥೆಯ ಅಧ್ಯಕ್ಷರ ಪತ್ರ ದಿನಾಂಕ 8–12–2007.

**ಪೀಠಿಕೆ :**

ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ./ಬಿ.ಇಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಪಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಶಿವಮೊಗ್ಗ ಜಿಲ್ಲೆ ಸಾಗರದ ಸಾಗರ ಗಂಗೋತ್ರಿ ಎಜುಕೇಷನಲ್ ಟ್ರಸ್ಟ್ (ರಿ), ಸಾಗರದಲ್ಲಿ ಸಾಗರ ಸಂಗೋತ್ರಿ ಶಿಕ್ಷಣ ಮಹಾವಿದ್ಯಾಲಯವನ್ನು 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ಆದೇಶದಲ್ಲಿ ಎನ್.ಸಿ.ಟಿ.ಇ. ಸದರಿ ಕಾಲೇಜಿನ ಬಿ.ಇಡಿ. ಕೋರ್ಸಿಗೆ 2007–08ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಕೆಲವು ಷರತ್ತುಗಳೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ಸದರಿ ಸಂಸ್ಥೆಯ ಪ್ರಾಂಶುಪಾಲರು ತಮ್ಮ ಕಾಲೇಜಿನಲ್ಲಿ ಬಿ.ಇಡಿ. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 141 ಯುಎಸ್‌ವಿ 2007, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2007.**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ. ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿವಮೊಗ್ಗ ಜಿಲ್ಲೆ ಸಾಗರದ ಸಾಗರ ಗಂಗೋತ್ರಿ ಎಜುಕೇಷನಲ್ ಟ್ರಸ್ಟ್ (ರಿ)ನ ಸಾಗರ ಗಂಗೋತ್ರಿ

ಶಿಕ್ಷಣ ಮಹಾವಿದ್ಯಾಲಯ, ಸಾಗರ, ಈ ವಿದ್ಯಾಸಂಸ್ಥೆಗೆ 2007–08ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 137

**ಯು.ಬಿ. ಉಳವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ಶಿಕ್ಷಣ ಸಚಿವಾಲಯ**

**ವಿಷಯ :** ಹಾಸನದ ಹೊಸ ಸರ್ಕಾರಿ ಕಾನೂನು ಕಾಲೇಜಿನ ಕಟ್ಟಡದ ಬಾಡಿಗೆಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕಾಶಿಇ–39–ಯೋಜನೆ–2007–08, ದಿನಾಂಕ 18–8–2007.

**ಪ್ರಸ್ತಾವನೆ :**

1) ಮೇಲೆ ಓದಲಾದ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರದಲ್ಲಿ 2007–08ನೇ ಸಾಲಿನಿಂದ ಹಾಸನದಲ್ಲಿ ಹೊಸ ಸರ್ಕಾರಿ ಕಾನೂನು ಕಾಲೇಜನ್ನು ಪ್ರಾರಂಭಿಸಿದ್ದು ಆ ಕಾಲೇಜಿಗೆ ಸ್ವಂತ ಕಟ್ಟಡ ಇರುವುದಿಲ್ಲವೆಂದು ಪ್ರಾಂಶುಪಾಲರು ಸರ್ಕಾರಿ ಕಾನೂನು ಕಾಲೇಜು ಹಾಸನರವರು ತಿಳಿಸಿರುತ್ತಾರೆ. ಮುಂದುವರೆದು, ಸದರಿ ಕಾಲೇಜನ್ನು ನಡೆಸಲು ಹಾಸನ ನಗರದ ಎಂ.ಜಿ. ರಸ್ತೆಯಲ್ಲಿರುವ ಶ್ರೀಮತಿ ಶಾರದ ಎಂ.ಎಸ್. ಇವರಿಗೆ ಸೇರಿದ ಕಟ್ಟಡವನ್ನು ಬಾಡಿಗೆ ಆಧಾರದ ಮೇಲೆ ಪಡೆಯಲು ಲೋಕೋಪಯೋಗಿ ಇಲಾಖೆಯವರಿಂದ ಮಾಸಿಕ 13,200/–ರೂಗಳಂತೆ ಬಾಡಿಗೆಯನ್ನು ನಿಗಧಿಪಡಿಸಿ ಪ್ರಮಾಣ ಪತ್ರವನ್ನು ಪಡೆದು ಅನುಮೋದನೆಗಾಗಿ ಸಲ್ಲಿಸಿರುವುದಾಗಿ ತಿಳಿಸುತ್ತಾ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2001, ಬೆಂಗಳೂರು ದಿನಾಂಕ 2–10–2001ರ ಆರ್ಥಿಕ ಪ್ರತ್ಯಾಯೋಜನೆ ಅಡಿಯಲ್ಲಿ ಇಲಾಖಾ ಮುಖ್ಯಸ್ಥರಿಗೆ ಮಾಸಿಕ 10,000/– ರೂಗಳವರೆಗೆ ಮಾತ್ರ ಕಟ್ಟಡ ಬಾಡಿಗೆ ನಿಗಧಿಪಡಿಸಲು ಅವಕಾಶವಿರುತ್ತದೆ. ಈ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಯ ಪ್ರಮಾಣ ಪತ್ರದ ಅನುಸಾರ 13,200/–ರೂಗಳಿಗೆ ಬಾಡಿಗೆ ನಿಗಧಿಪಡಿಸಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 357 ಯೋಸಕ 2007, ಬೆಂಗಳೂರು, ದಿನಾಂಕ: 11ನೇ ಜನವರಿ 2008.**
**(ಇಡಿ 157 ಸ್ಕೀಮರ (ಯುನಿಕ್) 2007, ದಿನಾಂಕ 11–1–2008.**

3) 2007–08ನೇ ಸಾಲಿನಿಂದ ಹಾಸನದಲ್ಲಿ ಪ್ರಾರಂಭಿಸಲಾದ ಸರ್ಕಾರಿ ಕಾನೂನು ಕಾಲೇಜನ್ನು ನಡೆಸಲು ಹಾಸನ ನಗರ ಎಂ.ಜಿ. ರಸ್ತೆಯಲ್ಲಿರುವ ಶ್ರೀಮತಿ ಶಾರದಾ ಎಂ.ಎಸ್. ಇವರಿಗೆ ಸೇರಿದ ಕಟ್ಟಡವನ್ನು ಮಾಸಿಕ 13,200/–ರೂಗಳಿಗೆ (ಹದಿಮೂರು ಸಾವಿರದ ಇನ್ನೂರು ರೂಪಾಯಿಗಳು ಮಾತ್ರ) ಬಾಡಿಗೆ ಪಡೆಯಲು ಬಾಡಿಗೆಗೆ ಪಡೆಯಲು ಎಲ್ಲಾ ನಿಯಮಾವಳಿಗಳನ್ನು ಪಾಲಿಸುವ ಷರತ್ತಿಗೆ ಒಳಪಟ್ಟು ಸರ್ಕಾರವು ಆಯುಕ್ತರು ಕಾಲೇಜು ಶಿಕ್ಷಣ ಇಲಾಖೆ ಬೆಂಗಳೂರುರವರಿಗೆ ಅನುಮತಿಸುತ್ತದೆ.

4) ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 867 ಐಎಫ್‌ಎಸ್ 2007, ದಿನಾಂಕ 23–10–2007ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 168

**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಕೆ.ಬಿ. ದೇಸಾಯಿ, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಗದಗ ಇವರ ವಿರುದ್ಧದ ಆರೋಪಗಳ ಬಗ್ಗೆ ಮಾಡಿರುವ ಇಲಾಖಾ ವಿಚಾರಣೆ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಕಾರಣ ಕೇಳುವ ನೋಟೀಸು ಸಂಖ್ಯೆ ಲಾ 238 ಪಿಪಿಇ 01, ದಿನಾಂಕ 27–4–2002.
2. ಶ್ರೀ ಕೆ.ಬಿ. ದೇಸಾಯಿ ಇವರ ಪ್ರತಿವಾದದ ಲಿಖಿತ ಹೇಳಿಕೆ ದಿನಾಂಕ 12–6–02.
3. ಸರ್ಕಾರಿ ಆದೇಶ ಸಂಖ್ಯೆ ಲಾ 238 ಪಿಪಿಇ 01 ದಿನಾಂಕ 28–10–2003.
4. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ 4–2–2008.

**ಪ್ರಸ್ತಾವನೆ :**

ಶ್ರೀ ಕೆ.ಬಿ. ದೇಸಾಯಿ, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಗದಗ ಇವರು ಕೆ.ಜಿ.ಎಫ್. ನ ಅಡಿಷನಲ್ ಜೆಎಂಎಫ್‌ಸಿ ನ್ಯಾಯಾಲಯದ ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ಮೇಲೆ ಲಂಚಗುಳಿತನ, ಸ್ವಜನ ಪಕ್ಷಪಾತ, ಜಾತೀಯತೆ ಕರ್ತವ್ಯ ಭ್ರಷ್ಟತೆ ಮುಂತಾದ ಆರೋಪಗಳ ಬಗ್ಗೆ ಮೇಲೆ ಕ್ರಮಾಂಕ (1)ರಲ್ಲಿ ಓದಲಾಗಿರುವ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ದಿನಾಂಕ 27–4–2002ರಂದು ಜಾರಿ ಮಾಡಲಾಗಿತ್ತು.

ಮೇಲೆ ಕ್ರಮಾಂಕ (2)ರಲ್ಲಿ ಓದಲಾಗಿರುವ ದಿನಾಂಕ 12–6–02ರಲ್ಲಿ ಆರೋಪಿತ ಸರ್ಕಾರಿ ಅಧಿಕಾರಿ ಶ್ರೀ ಕೆ.ಬಿ. ದೇಸಾಯಿ ಇವರು ತಮ್ಮ ಲಿಖಿತ ಪ್ರತಿವಾದದ ಹೇಳಿಕೆಯಲ್ಲಿ ಅವರ ಮೇಲೆ ಮಾಡಿರುವ ಆರೋಪಗಳನ್ನು ಸ್ಪಷ್ಟವಾಗಿ ನಿರಾಕರಿಸಿದ್ದರು.

ಮೇಲೆ ಕ್ರಮಾಂಕ (3)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾಗಿರುವ ಆರೋಪಗಳ ಸತ್ಯಾಸತ್ಯತೆಯ ಬಗ್ಗೆ ತಿಳಿಯಲು ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ಉಪ ನಿಯಮ (2)ರನ್ವಯ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶ ಸಂಖ್ಯೆ ಸಿಆಸುಇ 3 ಸೇಇಎ 96 ದಿನಾಂಕ 24–4–98ರನ್ವಯ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯನ್ನು ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ಮೇಲೆ ಕ್ರಮಾಂಕ (4)ರಲ್ಲಿ ಓದಲಾಗಿರುವ ತಮ್ಮ ವರದಿಯಲ್ಲಿ ಎರಡೂಕಡೆಯ ಎಲ್ಲಾ ಮೌಖಿಕ ಮತ್ತು ದಾಸ್ತಾವೇಜಿನ ಸಾಕ್ಷ್ಯಗಳನ್ನು ಪರಿಶೀಲಿಸಲಾಗಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾಗಿರುವ ಆರೋಪಗಳು ರುಜುವಾಗಿರುವುದಿಲ್ಲ. ಆರೋಪಿತ ಸರ್ಕಾರಿ ಅಧಿಕಾರಿಗಳ ಮೇಲೆ ಮಾಡಲಾಗಿರುವ ಆರೋಪಗಳು ಸಾಮಾನ್ಯ ಆರೋಪಗಳಾಗಿದ್ದು ವಿವರಗಳ ಕೊರತೆಯಿದ್ದು ಆರೋಪಗಳನ್ನು ಸಿದ್ದಪಡಿಸಲಾಗಿಲ್ಲ. ಆದ್ದರಿಂದ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾಗಿರುವ ಆರೋಪಗಳು ರುಜುವಾಗಿರುವುದಿಲ್ಲ ಎಂದು ನಿಷ್ಕರ್ಷೆ ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 63 ಪಿಪಿಇ 2005, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಕೆ.ಬಿ. ದೇಸಾಯಿ, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಗದಗ ಅವರನ್ನು ಕ್ರಮಾಂಕ ಲಾ 238 ಪಿಪಿಇ 01 ದಿನಾಂಕ 27–4–2002ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಈ ಮೂಲಕ ಆರೋಪ ಮುಕ್ತಗೊಳಿಸಲಾಗಿದೆ.

ಭಾರತ ಸರ್ಕಾರದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 552

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ ಮತ್ತು ಸು ಕಾಫಿಪೋಸ ಮತ್ತು ಅಭಿಯೋಗ)

## ಶಿಕ್ಷಣ ಸಚಿವಾಲಯ

**ವಿಷಯ :** ಕಾಲೇಜು ಶಿಕ್ಷಣ ಇಲಾಖೆಯ ಶೈಕ್ಷಣಿಕ ವಿಭಾಗಕ್ಕೆ ಪ್ರತ್ಯೇಕವಾಗಿ ಜೆರಾಕ್ಸ್ ಯಂತ್ರ ಖರೀದಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಏಕ ಕಡತ ಸಂಖ್ಯೆ: ಕಾಶಿಇ/ಶೈ.ವಿ/ ಜೆರಾಕ್ಸ್/52/07–08, ದಿನಾಂಕ 26–11–2007.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಕಾಲೇಜು ಶಿಕ್ಷಣ ಇಲಾಖೆ ಆಯುಕ್ತರು, ಬೆಂಗಳೂರುರವರು ಕೇಂದ್ರ ಕಛೇರಿಯ ಶೈಕ್ಷಣಿಕ ವಿಭಾಗಕ್ಕೆ ಪ್ರತ್ಯೇಕವಾಗಿ 72,292 ರೂಪಾಯಿಗಳಲ್ಲಿ ಜೆರಾಕ್ಸ್ ಯಂತ್ರ ಖರೀದಿಸಲು ಅನುಮತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರು ಮಾಡಿದ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: 391 ಯೋಯೋಕ 2007, ಬೆಂಗಳೂರು, ದಿನಾಂಕ: 16ನೇ ಜನವರಿ 2008.**

**(ಇಡಿ 05 ಸ್ವೀಮರ (ಯುನಿಕ್) ಬೆಂಗಳೂರು ದಿನಾಂಕ 16–1–2008)**

2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 2202–03–001–0–01–059 (ಯೋಜನೆ) ಯಡಿ ಒದಗಿಸಲಾದ ಅನುದಾನದ ಮಿತಿಯೊಳಗೆ ಕೇಂದ್ರ ಕಛೇರಿಯ ಶೈಕ್ಷಣಿಕ ವಿಭಾಗಕ್ಕೆ ಪ್ರತ್ಯೇಕವಾಗಿ 72,292 ರೂಪಾಯಿಗಳಲ್ಲಿ (ಎಪ್ಪತ್ತೆರಡು ಸಾವಿರದ

ಇನ್ನೂರ ತೊಂಬತ್ತೆರಡು ರೂಪಾಯಿಗಳು ಮಾತ್ರ) ಜೆರಾಕ್ಸ್ ಯಂತ್ರವನ್ನು ಡಿ.ಜಿ.ಎಸ್. ಅಂಡ್ ರೇಟ್ ಕಾಂಟ್ರಾಕ್ಟ್ ಅಡಿಯಲ್ಲಿ ಖರೀದಿಸುವಾಗ ಖರೀದಿಗಳಿಗೆ ಸಂಬಂಧಿಸಿದಂತೆ ಎಲ್ಲಾ ಖರೀದಿ ನಿಯಮಗಳನ್ನು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 2000 ಮತ್ತು ಅದರಡಿಯಲ್ಲಿನ ನಿಯಮಗಳನ್ನು ಚಾಚೂ ತಪ್ಪದೇ ಕಡ್ಡಾಯವಾಗಿ ಹಾಗೂ ಕಟ್ಟುನಿಟ್ಟಾಗಿ ಪಾಲಿಸುವ ಷರತ್ತನ್ನು ವಿಧಿಸಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರಿಗೆ ಅನುಮೋದನೆ ನೀಡಿದೆ.

ಸದರಿ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಶಿಇ 1115 ಐ.ಎಫ್.ಎಸ್. 2007, ದಿನಾಂಕ 12–12–2007ರ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 167

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಶಿಕ್ಷಣ ಇಲಾಖೆ (ಯೋಜನೆ)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** 2007–08ನೇ ಶೈಕ್ಷಣಿಕ ಸಾಲಿಗೆ ಚಿಕ್ಕಮಗಳೂರು ಜಿಲ್ಲೆ ಶೃಂಗೇರಿಯ ಬಿ.ಜಿ.ಎಸ್. ಶಿಕ್ಷಣ ಮಹಾವಿದ್ಯಾಲಯದ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಕುರಿತು.

**ಓದಲಾಗಿದೆ:**
1. ಕರ್ನಾಟಕ ಸರ್ಕಾರದ ನಡವಳಿ ಸಂಖ್ಯೆ: ಇಡಿ 45 ಯುಎಸ್‌ವಿ 2007, ದಿ: 14–6–2007.
2. ಎನ್.ಸಿ.ಟಿ.ಇ. ಪತ್ರ ಸಂಖ್ಯೆ: F.SRO/NCTE/B.Ed./2006-07/14244, ದಿ: 7–11–2007.
3. ಸಂಸ್ಥೆಯ ಅಧ್ಯಕ್ಷರ ಪತ್ರ ದಿನಾಂಕ 22–11–2007.

**ಪ್ರಸ್ತಾವನೆ :**

ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ./ಬಿ.ಇಪಿ.ಇಡಿ., ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಪಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಮಂಡ್ಯ ಜಿಲ್ಲೆ ನಾಗಮಂಗಲದ ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್ (ರಿ), ಚಿಕ್ಕಮಗಳೂರು ಜಿಲ್ಲೆ ಶೃಂಗೇರಿಯಲ್ಲಿ ಬಿ.ಜಿ.ಎಸ್. ಶಿಕ್ಷಣ ಮಹಾವಿದ್ಯಾಲಯವನ್ನು 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ಆದೇಶದಲ್ಲಿ ಎನ್.ಸಿ.ಟಿ.ಇ. ಸದರಿ ಕಾಲೇಜಿನ ಬಿ.ಇಡಿ. ಕೋರ್ಸಿಗೆ 2007–08ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಕೆಲವು ಷರತ್ತುಗಳೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು/ಕಾರ್ಯದರ್ಶಿಗಳು ತಮ್ಮ ಕಾಲೇಜಿನಲ್ಲಿ ಬಿ.ಇಡಿ. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 138 ಯುಎಸ್‌ವಿ 2007 ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2007.**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ. ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮಂಡ್ಯ ಜಿಲ್ಲೆ ನಾಗಮಂಗಲದ ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್ (ರಿ)ನ ಚಿಕ್ಕಮಗಳೂರು ಜಿಲ್ಲೆ ಶೃಂಗೇರಿಯಲ್ಲಿ ಬಿ.ಜಿ.ಎಸ್. ಶಿಕ್ಷಣ ಮಹಾವಿದ್ಯಾಲಯಕ್ಕೆ 2007–08ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 124

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಕೆ.ಕೆ. ನಾಯಕ್, ನಿವೃತ್ತ ವಿಶೇಷಾಧಿಕಾರಿ, ಆರ್ಥಿಕ ಇಲಾಖೆ, (ವಿಶ್ರಾಂತಿ ವೇತನ) ಅವರ ವಿರುದ್ಧದ ಇಲಾಖಾ ವಿಚಾರಣೆ –ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 5 ಎಸ್ಇಎನ್ 2001, ದಿ: 28–1–2004.
2. ಪತ್ರದ ಸಂಖ್ಯೆ: ಎಲ್‌ಡಿ 19 ಪಿಆರ್‌ಎಸ್ 2006, ದಿನಾಂಕ 20–4–2006 ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ಅವರಿಂದ.
3. ನೋಟೀಸ್ ಸಂಖ್ಯೆ ಸಿಆಸುಇ 5 ಎಸ್ಇಎನ್ 2001, ದಿ: 10–5–2006, ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಅವರಿಂದ
4. ಶ್ರೀ ಕೆ.ಕೆ. ನಾಯಕ್ ನಿವೃತ್ತ ವಿಶೇಷಾಧಿಕಾರಿ, ಅವರು ನೀಡಿದ ಉತ್ತರ ದಿನಾಂಕ 16–6–2006.
5. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಅವರ ಪತ್ರ ಸಂಖ್ಯೆ ಪಿಎಸ್‌ಸಿ 104 ಸಿಎಸ್ಎಸ್ 2007, ದಿ: 13–2–2006.

**ಪ್ರಸ್ತಾವನೆ :**

ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು ಈ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಕರ್ನಾಟಕ ಆರ್ಥಿಕ ಸಂಹಿತೆಯ 15ನೇ ಪರಿಚ್ಛೇದವನ್ನು ಉಲ್ಲಂಘಿಸಿ ತನ್ನ ಅಧಿಕಾರ ವ್ಯಾಪ್ತಿಯನ್ನು ಮೀರಿ ಒಂಬತ್ತು ಮಂದಿ ಹೆಚ್.ಡಿ.ಎಫ್.ಸಿ. ಸಾಲಗಾರರಿಗೆ ರೂ. 1,87,023–00ಗಳನ್ನು ಮರುಪಾವತಿ ಮಾಡಿದ 7 ಪ್ರಕರಣಗಳಲ್ಲಿ ಕ್ರಾಸ್ ಮಾಡಿದ ಚೆಕ್‌ಗಳನ್ನು ನೀಡುವ ಮೂಲಕ ರೂ. 1,32,473ಗಳನ್ನು ಪಾವತಿ ಮಾಡಿ ಕರ್ನಾಟಕ ಆರ್ಥಿಕ ಸಂಹಿತೆಯ 72(ಎ) ಪರಿಚ್ಛೇದವನ್ನು ಉಲ್ಲಂಘಿಸಿ ಹೆಚ್.ಡಿ.ಎಫ್.ಸಿ. ಲೆಕ್ಕಪತ್ರಗಳ ನಿರ್ವಹಣೆಯ ಉಸ್ತುವಾರಿಯನ್ನು ಸಮರ್ಪಕವಾಗಿ ನಿರ್ವಹಿಸದ ಲೆಡ್ಜರ್ ಪುಸ್ತಕದಲ್ಲಿ ನಮೂದಾದ ತಪ್ಪು ಮಾಹಿತಿ ಆಧಾರದ ಮೇಲೆ ರೂ. 90,217–00ನ್ನು ಅಕ್ರಮವಾಗಿ ಪಾವತಿಸಿದ ಲೆಡ್ಜರ್‌ನ ನಮೂದುಗಳನ್ನು ಪರಿಶೀಲಿಸದೇ ಅಪಾರ ಹಣದ ಮರುಪಾವತಿಗೆ ಕಾರಣರಾದ ಹಾಗೂ ಸಂಬಂಧ ಪಡದ ಕಾಲ್ಪನಿಕ ವ್ಯಕ್ತಿಗಳಿಗೆ ರೂ. 51,348–00ಗಳ ಮೊತ್ತದ ಹಣವನ್ನು ಪಾವತಿ ಮಾಡಿದ ಆರೋಪಗಳಿಗಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ 28–1–2004ರ ಸರ್ಕಾರಿ ಆದೇಶದಲ್ಲಿ ಇತರರೊಡನೆ ಶ್ರೀ ಕೆ.ಕೆ. ನಾಯಕ್, ವಿಶೇಷಾಧಿಕಾರಿ, ಆರ್ಥಿಕ ಇಲಾಖೆ (ವಿಶ್ರಾಂತಿ ವೇತನ) ಅವರ ವಿರುದ್ಧವೂ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀಮತಿ ವತ್ಸಲ ವತ್ಸ, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ಪ್ರಗತಿಯಲ್ಲಿದ್ದಾಗ ಶ್ರೀ ಕೆ.ಕೆ. ನಾಯಕ್, ಅವರು ದಿನಾಂಕ 31–10–2004ರಂದು ಸೇವೆಯಿಂದ ವಯೋನಿವೃತ್ತಿ ಹೊಂದಿದರು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ 20–4–2006ರ ವಿಚಾರಣಾ ವರದಿ ಸಲ್ಲಿಸಿ ಶ್ರೀ ಕೆ.ಕೆ. ನಾಯಕ್ ಅವರ ವಿರುದ್ಧ ಆರೋಪ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು.

> ಆರೋಪಿಯು ಮರುಪಾವತಿಯ ಪ್ರಸ್ತಾವನೆಯನ್ನು ಅನುಮೋದಿಸಿದ್ದಾರೆ. ಆನಂತರ ಚೆಕ್‌ಗಳಿಗೆ ಸಹಿ ಹಾಕಿದ್ದಾರೆ. ಈ ಮೊತ್ತವನ್ನು ಪಾವತಿಸಲು ತಮಗೆ ಅಧಿಕಾರ ಇತ್ತೆಂಬುದಕ್ಕೆ ಪೂರಕವಾಗಿ ಯಾವುದೇ ಸಾಕ್ಷ್ಯವನ್ನು ಹಾಜರುಪಡಿಸಲಿಲ್ಲ. ಪ್ರಕರಣದ ಪ್ರತಿ ಅಂಶವನ್ನು ಪರಿಶೀಲಿಸಲು ಸಾಧ್ಯವಿಲ್ಲವೆಂದು ಪ್ರತಿಪಾದಿಸುವ ಆರೋಪಿಯು ಹಣವು ತಪ್ಪಾಗಿ ಪಾವತಿ ಆಗಿದೆ ಎಂಬುದನ್ನು ಒಪ್ಪಿಕೊಳ್ಳುತ್ತಾರೆ. ಆದ್ದರಿಂದ ಮೊದಲನೇ ಆರೋಪ ಸಾಬೀತಾಗಿದೆ. ಚೆಕ್‌ಗಳನ್ನು ತಾನು ಬರೆಯುವುದಿಲ್ಲ. ಆದ್ದರಿಂದ ಕ್ರಾಸ್ ಮಾಡದ ಚೆಕ್‌ಗಳನ್ನು ನೀಡಿರುವುದಕ್ಕೆ ತಾನು ಜವಾಬ್ದಾರನಲ್ಲವೆಂದು ಆರೋಪಿಯು ಪ್ರತಿಪಾದಿಸಿದ್ದಾರೆ. ಆದರೆ ಚೆಕ್‌ಗಳಿಗೆ ಆರೋಪಿಯೇ ಸಹಿ ಮಾಡಿದ್ದಾರೆ. ಈ ರೀತಿ ಸಹಿ ಮಾಡುವಾಗ ಅವುಗಳನ್ನು ಕ್ರಾಸ್ ಮಡಲಾಗಿದೆ ಎಂಬುದನ್ನು ಖಚಿತ ಪಡಿಸಿಕೊಳ್ಳುವುದು ಆರೋಪಿಯ ಕರ್ತವ್ಯ. ಸರ್ಕಾರದ್ ಹಣದ ವಿಷಯವನ್ನು ನಿರಂತರವಾಗಿ ನಿರ್ವಹಿಸುವ ಇಲಾಖೆಯ ಮುಖ್ಯಸ್ಥರಾದ ಆರೋಪಿಯು ಕರ್ನಾಟಕ ಆರ್ಥಿಕ ಸಂಹಿತೆಯ ಪರಿಚ್ಛೇದ 72(ಎ)ರ ಅರಿವು ಹೊಂದಿರಬೇಕಾದುದು ಅವಶ್ಯಕ. ಇದರಲ್ಲಿ ಲೋಪವೆಸಗಿ ಅದರ ಜವಾಬ್ದಾರಿಯಿಂದ ತಪ್ಪಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ 2ನೇ ಆರೋಪ ಸಾಬೀತಾಗಿದೆ. ಲೆಡ್ಜರ್ ಹಾಗೂ ಲೆಕ್ಕ ಪತ್ರಗಳನ್ನು ನಿರ್ವಹಿಸುವುದು ಹಾಗೂ ಅವುಗಳ ಉಸ್ತುವಾರಿ ವಹಿಸುವುದು ಗುಮಾಸ್ತರು ಹಾಗೂ 3ನೇ ಆರೋಪಿಯ ಕರ್ತವ್ಯ ಇದಕ್ಕೆ ಆರೋಪಿಯನ್ನು ಹೊಣೆ ಮಾಡಲಾಗದು. ಲೆಡ್ಜರ್‌ಗಳಲ್ಲಿ ನಮೂದು ಹಾಗೂ ಲೆಕ್ಕಪತ್ರಗಳ ನಿರ್ವಹಣೆ ಕೆಳಹಂತದ ಅಧಿಕಾರಿಗಳ ಕರ್ತವ್ಯ ಇದಕ್ಕಾಗಿ ಆರೋಪಿಯು ಹೊಣೆಗಾರನಾಗುವುದಿಲ್ಲ. ಲೆಡ್ಜರ್‌ನ ನಮೂದುಗಳಲ್ಲಿ ತಿದ್ದಿರುವುದು ಸ್ಪಷ್ಟವಾಗಿದೆ. ಕಾಲಕಾಲಕ್ಕೆ ಲೆಡ್ಜರ್‌ನ ನಮೂದುಗಳ ಸ್ಥಿರೀಕರಣ ಮಾಡುವ ಕೆಲಸವನ್ನು ಈ ಆರೋಪಿಯ ಕರ್ತವ್ಯ ಎಂದು ತೋರಿಸಲು ಯಾವ ದಾಖಲೆಯೂ ಇಲ್ಲ. ಚೆಕ್‌ಗಳಲ್ಲಿ ಹೆಸರನ್ನು ಬರೆದಿರುವುದು ಮೂರನೆಯ ಆರೋಪಿ. ಆದ್ದರಿಂದ ತಪ್ಪು ಹೆಸರುಗಳನ್ನು ಬರೆದಿರುವುದಕ್ಕೆ ಆರೋಪಿಯನ್ನು ಹೊಣೆ ಮಾಡಲು ಸಾಧ್ಯವಿಲ್ಲ. ಆದ್ದರಿಂದ 3,4,5,6ನೇ ಆರೋಪಗಳು ಸಾಬೀತಾಗಿಲ್ಲ.

ಮೇಲಿನ ವಿಚಾರಣಾ ವರದಿಯ ಪ್ರತಿಯನ್ನು ಲಗತ್ತಿಸಿ ಕೆ.ಕೆ. ನಾಯಕ್, ನಿವೃತ್ತ ವಿಶೇಷಾಧಿಕಾರಿ, ಆರ್ಥಿಕ ಇಲಾಖೆ (ವಿಶ್ರಾಂತಿ ವೇತನ) ಅವರಿಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ 10–5–2006ರ ಎರಡನೇ ನೋಟೀಸ್ ನೀಡಿ ವಿಚಾರಣಾ ವರದಿಯ ಬಗ್ಗೆ ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಶ್ರೀ ಕೆ.ಕೆ. ನಾಯಕ್, ಅವರು ಮೇಲೆ (4)ರಲ್ಲಿ ಓದಲಾದ ದಿನಾಂಕ 16–6–2006ರ ಉತ್ತರ ಸಲ್ಲಿಸಿ ತಾನು ಹೆಚ್.ಡಿ.ಎಫ್.ಸಿ. ಮೊತ್ತವನ್ನು ನಿರ್ವಹಿಸಿದ್ದು ಸದರೀ ಸಂಸ್ಥೆಯು ಕೇಂದ್ರ ಸರ್ಕಾರದ ನಿಗಮವೇ ಹೊರತು ರಾಜ್ಯಕ್ಕೆ ಸಂಬಂಧಿಸಿದ ಇಲಾಖೆ ಅಲ್ಲ. ಆದ್ದರಿಂದ ಇದರಲ್ಲಿ ಕರ್ನಾಟಕ ಆರ್ಥಿಕ ಸಂಹಿತೆಯು ಅನ್ವಯಿಸುವುದಿಲ್ಲ. ಹಿಂದೆಯೂ ಹೆಚ್ಚಿನ ಮೊತ್ತಗಳು ಮರುಪಾವತಿ ಆಗಿದ್ದು ಅವುಗಳನ್ನು ವಸೂಲು ಮಾಡಲಾಗಿದೆ. ವಿಚಾರಣೆಯಲ್ಲಿ ಸಾಕ್ಷ್ಯ ನುಡಿದ ಯಾರೂ ಸಹ ತಮ್ಮ ವಿರುದ್ಧ ಯಾವುದೇ ಅಕ್ರಮ ಕುರಿತು ಹೇಳಿಲ್ಲ. ಕೊನೆಯ 4 ಆರೋಪಗಳು ತನ್ನ ವಿರುದ್ಧ ಸಾಬೀತಾಗಿಲ್ಲವೆಂದು ನಿರ್ಣಯ ನೀಡಿರುವ ವಿಚಾರಣಾಧಿಕಾರಿಗಳು ಅದಕ್ಕೆ ಅವಲಂಬಿಸಿದ ಸಾಕ್ಷ್ಯಾಧಾರಗಳನ್ನು ಮೊದಲ ಎರಡು ಆರೋಪಗಳ ಬಗ್ಗೆ ನೀಡಿದ ನಿರ್ಣಯಕ್ಕೆ ಅವಲಂಬಿಸಿಲ್ಲ. ಪೂರ್ವ ನಿರ್ಧರಿತ ಹಾಗೂ ಊಹಾತ್ಮಕ ಆಧಾರಗಳನ್ನು ಅನುಸರಿಸಿ ಈ ಆರೋಪಗಳು ಸಾಬೀತಾಗಿವೆ ಎಂಬ ನಿರ್ಣಯ ನೀಡಿದ್ದು ಅವುಗಳಿಗೆ ಆಧಾರ ಇಲ್ಲ. ವಿಚಾರಣಾಧಿಕಾರಿಗಳು ವಿಚಾರಣೆಯಲ್ಲಿನ ಅಂಶಗಳ ಬಗ್ಗೆ ಸಮರ್ಪಕ ವಿಶ್ಲೇಷಣೆ ನಡೆಸಿಲ್ಲ. ಶಿಸ್ತು ಪ್ರಾಧಿಕಾರದ ಪರ 10ನೇ ಸಾಕ್ಷಿಯು ನೀಡಿದ ಸಾಕ್ಷ್ಯವನ್ನು ವಿಚಾರಣಾಧಿಕಾರಿಗಳು ಪರಿಗಣಿಸಿದ್ದು ಅದರಲ್ಲಿ 3ನೇ ಆರೋಪಿಯಿಂದ ಅಕ್ರಮ ಉಂಟಾಗಿರುವುದು ಮೂಡಿ ಬಂದಿದೆ. ಅದಾಗ್ಯೂ ಕೇವಲ ಸಹಿ ಮಾಡಿದ ನನ್ನ ವಿರುದ್ಧ ಆರೋಪ ಸಾಬೀತಾಗಿದೆ ಎಂಬ ನಿರ್ಣಯವನ್ನು ವಿಚಾರಣಾಧಿಕಾರಿಗಳು ಕೈಗೊಂಡಿದ್ದು ಈ ನಿರ್ಣಯವು ಯಾವುದೇ ಕಾನೂನು ಮಾನ್ಯ ಪಡೆಯದ ಕಾರಣ ಅದನ್ನು ಒಪ್ಪದೇ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

ಆರೋಪಿ ನಿವೃತ್ತ ಅಧಿಕಾರಿಯ ಉತ್ತರದಿಂದಾಗಿ ಪ್ರಕರಣವನ್ನು ಮರು ಪರಿಶೀಲಿಸಲಾಗಿದೆ. ಹೆಚ್.ಡಿ.ಎಫ್.ಸಿ. ಕೇಂದ್ರ ಸರ್ಕಾರದ ನಿಗಮವಾದರೂ ಅದು ರಾಜ್ಯ ಸರ್ಕಾರಿ ನೌಕರರಿಗೆ ನೀಡುವ ಗೃಹ ನಿರ್ಮಾಣ ಸಾಲವನ್ನು ರಾಜ್ಯ ಸರ್ಕಾರದ ವತಿಯಿಂದಲೇ ಖಜಾನೆ ನಿರ್ದೇಶಕರ ಮೂಲಕ ನಿರ್ವಹಿಸಲಾಗುತ್ತಿತ್ತು. ನಿರ್ಮಾಣ ಮುಂಗಡ ಪಡೆದ ಸರ್ಕಾರಿ ನೌಕರರಿಂದ ವಸೂಲು ಮಾಡುವ ಬಡ್ಡಿಯ ಮೊತ್ತಕ್ಕಿಂತ ಹೆಚ್.ಡಿ.ಎಫ್.ಸಿ. ವಿಧಿಸುವ ಬಡ್ಡಿಯ ಮೊತ್ತ ಹೆಚ್ಚಾಗಿದ್ದ ಕಾರಣ ಅವೆರಡರ ನಡುವಿನ ವ್ಯತ್ಯಾಸದ ಹಣವನ್ನು ರಾಜ್ಯ ಸರ್ಕಾರದಿಂದ ನಿಗಮಕ್ಕೆ ಪಾವತಿ ಮಾಡಲಾಗುತ್ತಿತ್ತು. ಆದ್ದರಿಂದ ಈ ಪ್ರಕರಣದಲ್ಲಿ ಕರ್ನಾಟಕ ಆರ್ಥಿಕ ಸಂಹಿತೆಯ ಪರಿಚ್ಛೇದಗಳು ಅನ್ವಯವಾಗುತ್ತವೆ. ಅನ್ವಯವಾಗುವುದಿಲ್ಲ ಎಂಬ ಆರೋಪಿಯ ವಾದವನ್ನು ಒಪ್ಪಲು ಸಾಧ್ಯವಿಲ್ಲ. ವಿಚಾರಣಾಧಿಕಾರಿಗಳು ಪ್ರತಿ ಆರೋಪಗಳಲ್ಲಿನ ಅಂಶಗಳನ್ನು ವಿಶ್ಲೇಷಿಸಿದ ನಂತರವೇ ನಿರ್ಣಯ ನೀಡಿದ್ದಾರೆ. ಮರುಪಾವತಿಯ ಪ್ರಸ್ತಾವನೆಯನ್ನು ಆರೋಪಿಯು ಅನುಮೋದಿಸಿದ ನಂತರವಷ್ಟೇ ಚೆಕ್‌ಗಳಿಗೆ ಸಹಿ ಹಾಕಿದ್ದಾರೆ. ಸದರಿ ಮೊತ್ತವು ತಪ್ಪಾಗಿ ಪಾವತಿ ಆಗಿರುವುದನ್ನು ಆರೋಪಿಯೇ ಒಪ್ಪಿಕೊಂಡಿದ್ದಾರೆ. ಹಾಗೆಯೇ ಕ್ರಾಸ್ ಮಾಡಿದ ಚಕ್‌ಗಳಿಗೆ ಆರೋಪಿಯೇ ಸಹಿ ಮಾಡಿದ್ದಾರೆ. ಈ ರೀತಿ ಸಹಿ ಮಾಡಿರುವಾಗ ಕ್ರಾಸ್ ಮಾಡದಿರುವ ಅಂಶವನ್ನು ಗಮನಿಸಿಯೇ ಇರುತ್ತಾರೆ. ಆದ್ದರಿಂದ ಆರೋಪಿಯ ವಾದದಲ್ಲಿ ಯಾವುದೇ ಪರಿಶೀಲನೆಗೆ ಅರ್ಹವಾದ ಅಂಶಗಳು ಇರುವುದಿಲ್ಲ. ಆದ್ದರಿಂದ ಕೆ.ಕೆ. ನಾಯಕ್, ಅವರ ವಾದವನ್ನು ಒಪ್ಪಿಕೊಳ್ಳದೇ ಆರೋಪಗಳು ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡ ಸರ್ಕಾರವು ಕರ್ನಾಟಕ ಲೋಕ ಸೇವೆ ಆಯೋಗದ ಸಮಹತಿಯೊಡನೆ ದಂಡನೆ ವಿಧಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 5 ಎಸ್‌ಇಎನ್ 2001, ಬೆಂಗಳೂರು, ದಿನಾಂಕ: 3ನೇ ಮೇ 2008.**

ಕರ್ನಾಟಕ ನಾಗರೀಕ ಸೇವಾ ನಿಯಮಗಳ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕೆ.ಕೆ. ನಾಯಕ್, ನಿವೃತ್ತ ವಿಶೇಷಾಧಿಕಾರಿ, ಆರ್ಥಿಕ ಇಲಾಖೆ (ವಿಶ್ರಾಂತಿ ವೇತನ) ಅವರ ದುರ್ನಡತೆಯಿಂದ ಸರ್ಕಾರಕ್ಕೆ ಉಂಟಾದ ರೂ. 2,29,385–00ಗಳನ್ನು (ಎರಡು ಲಕ್ಷದ ಇಪ್ಪತ್ತೊಂಬತ್ತು ಸಾವಿರದ ಮುನ್ನೂರ ಎಂಬತ್ತೈದು ರೂಪಾಯಿಗಳು ಮಾತ್ರ) ಹಣ ಪಾವತಿಯಾದ ದಿನಾಂಕದಿಂದ ಇಂದಿನವರೆಗೆ ಶೇಕಡ 8ರಷ್ಟು ಬಡ್ಡಿಯೊಡನೆ ಅವರ ನಿವೃತ್ತಿ ಸೌಲಭ್ಯಗಳಿಂದ ಮುರಿದುಕೊಳ್ಳಬೇಕೆಂದು ಹಾಗೂ ಸಾಬೀತಾದ ದುರ್ನಡತೆಗಾಗಿ ಅವರ ವಿಶ್ರಾಂತಿ ವೇತನದಿಂದ ಮಾಸಿಕ ರೂ. 500–00 (ಐದುನೂರು ರೂಪಾಯಿಗಳು ಮಾತ್ರ)ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 2 ವರ್ಷಗಳ ಅವಧಿಗೆ ಕಡಿತಗೊಳಿಸಬೇಕೆಂದು ಆದೇಶಿಸುತ್ತದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.765

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ :** ಶ್ರೀ ಎಂ. ಅಮರನಾಥ್ ಸುಮತಿ, ಕೆ.ಎ.ಎಸ್. (ನಿವೃತ್ತ) ಅಧಿಕಾರಿ ಮತ್ತು ಶ್ರೀ ಪಿ.ಎಂ. ಹ್ಯಾರೀಸ್, ದ್ವಿತೀಯ ದರ್ಜೆ ಸಹಾಯಕರು ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂ: ಸಿಆಸುಇ 58 ಎಸ್‌ಇಎಸ್ 2001, ದಿ: 30–3–2007.

2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಡಗು ಇವರ ವಿಚಾರಣಾ ವರದಿ ದಿ: 27–9–07.

**ಪ್ರಸ್ತಾವನೆ :**

ಮೇಲೆ ಕ್ರಮ ಸಂ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಂ. ಅಮರನಾಥ್ ಸುಮತಿ ಕೆ.ಎ.ಎಸ್. (ನಿವೃತ್ತ) ಅಧಿಕಾರಿ ಇವರು ಮಡಿಕೇರಿ ಉಪ ವಿಭಾಗದ ಉಪ ವಿಭಾಗಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಹಾಗೂ ಶ್ರೀ ಪಿ.ಎಂ.ಹ್ಯಾರೀಸ್, ದ್ವಿತೀಯ ದರ್ಜೆ ಸಹಾಯಕರು, ಇವರು ಉಪ ವಿಭಾಗಾಧಿಕಾರಿಗಳ ಕಛೇರಿ ಮಡಿಕೇರಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಟಿಬೇಟಿಯನ್ ನಿರಾಶ್ರಿತರಾಗಿದ್ದು, ಭಾರತದ ಪೌರತ್ವ ಇಲ್ಲದಿದ್ದು, ಜಮೀನು ಖರೀದಿಸಲು ಅವಕಾಶವಿಲ್ಲವಿದ್ದರೂ ಪಿರಿಯಾಪಟ್ಟಣ ತಾ: ಬೈಲಕುಪ್ಪೆ ಗ್ರಾಮದ 4ನೇ ಆರ್ಲಿಕುಮಾರಿ ಟಿಬೇಟಿಯನ್ ಕಾಲೋನಿ ನಿವಾಸಿಯಾದ ಶ್ರೀ ಚಿಮ್‌ಗೋನವೊ ಬಿನ್ ಗುರುವ್ಯಾಂಗಲ್‌ರವರಿಗೆ ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕು ಕುಶಾಲನಗರ ಹೋಬಳಿಯ ಕೂಡ್ಲೂರು ಗ್ರಾಮದ ಕೈಗಾರಿಕಾ ಬಡಾವಣೆಯ ಕೂಡ್ಲೂರು ಗ್ರಾಮದ ಕಂದಾಯ ಸರ್ವೆ ನಂ: 27–2, 27–3, 28–4, 28–5 ರಲ್ಲಿನ ಜಮೀನು ಖರೀದಿಸಲು ಅನುಮತಿ ನೀಡಿ ಭಾರತ ಪೌರತ್ವ ಕಾಯಿದೆ 1955ರ ಕಂ 3(1) ಮತ್ತು (2)(ಎ)(4)ಗಳ ಷರತ್ತುಗಳನ್ನು ಉಲ್ಲಂಘಿಸಿದ ಆರೋಪ ಸಂಬಂಧ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ನ್ನು ಓದಿಕೊಂಡಂತೆ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವಿಚಾರಣೆ ನಡೆಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಡಗು ರವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಕ್ರಮ ಸಂ: (2)ರಲ್ಲಿ ಓದಲಾದ ದಿ: 27–9–07ರ ವರದಿಯಲ್ಲಿ ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ವಿಚಾರಣಾ ವರದಿ ಸಲ್ಲಿಸಿ, ಶ್ರೀ ಚಿಮ್ಮಗೋನವೋ ಇವರು ಆರೋಪಿತ ಸರ್ಕಾರಿ ಅಧಿಕಾರಿ/ನೌಕರರ ಮುಂದೆ ಹಾಜರು ಪಡಿಸಿದ ದಾಖಲೆಗಳು ಒಬ್ಬ ಭಾರತದ ಪ್ರಜೆಗೆ ನೀಡುವಂತಹ ದಾಖಲೆಗಳೇ ಆಗಿದ್ದು, ಅವುಗಳ ಸತ್ಯಾಸತ್ಯತೆ ಮತ್ತು ನಿಖರತೆ ಬಗ್ಗೆ ಅಧಿಕಾರಿಯ ಮುಂದೆ ಯಾವುದೇ ಆಕ್ಷೇಪಣೆಗಳು/ಸಂಶಯಗಳು ಇಲ್ಲದ ಕಾರಣ ವಿಚಾರಣಾ ಕಡತದಲ್ಲಿರುವ ದಾಖಲೆಗಳು ಅಥವಾ ಸಾಕ್ಷಿಗಳ ಹೇಳಿಕೆಯ ಮುಖಾಂತರ ಆಪಾದನೆಗಳನ್ನು ಸಾಬೀತುಗೊಳಿಸಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸುತ್ತಾ ಲಭ್ಯವಿರುವ ಹಲವು ದಾಖಲೆಗಳನ್ನು ಉಲ್ಲೇಖಿಸಿ ಹಾಗೂ ಸಾಕ್ಷಿಗಳ ಹೇಳಿಕೆಯನ್ನಾಧರಿಸಿ ಇವರುಗಳ ಮೇಲಿನ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ. ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಎಂ. ಅಮರನಾಥ್ ಸುಮತಿ, ಕೆ.ಎ.ಎಸ್. (ನಿವೃತ್ತ) ಮತ್ತು ಶ್ರೀ ಪಿ.ಎಂ. ಹ್ಯಾರೀಸ್, ದ್ವಿತೀಯ ದರ್ಜೆ ಸಹಾಯಕರು, ಉಪ ವಿಭಾಗಾಧಿಕಾರಿಗಳ ಕಛೇರಿ, ಮಡಿಕೇರಿ ಅವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಒಪ್ಪದೇ ಇರಲು ಯಾವುದೇ ಸಕಾರಣಗಳು ಇರುವುದಿಲ್ಲವಾದ್ದರಿಂದ ವಿಚಾರಣಾ ವರದಿಯನ್ನು ಅಂಗೀಕರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 58 ಎಸ್‌ಇಎನ್ 01(ಸಿಆಸುಇ 15 ಕೆಇವಿ 7)ಬೆಂಗಳೂರು, ದಿನಾಂಕ:18ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ಎಂ. ಅಮರನಾಥ್ ಸುಮತಿ, ಕೆ.ಎ.ಎಸ್. (ನಿವೃತ್ತ) ಅಧಿಕಾರಿ ಅಂದಿನ ಉಪ ವಿಭಾಗಾಧಿಕಾರಿ, ಮಡಿಕೇರಿ ಮತ್ತು ಶ್ರೀ ಪಿ.ಎಂ. ಹ್ಯಾರೀಸ್, ದ್ವಿತೀಯ ದರ್ಜೆ ಸಹಾಯಕರು, ಉಪ ವಿಭಾಗಾಧಿಕಾರಿಗಳ ಕಛೇರಿ, ಮಡಿಕೇರಿ ಇವರುಗಳನ್ನು ದಿ: 26–11–2004ರ ನೋಟೀಸ್‌ನಲ್ಲಿ ಮಾಡಲಾದ ಆರೋಪದಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಇವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.515

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ :** ಕರ್ನಾಟಕ ಉಚ್ಚ ನ್ಯಾಯಾಲಯದ ಧಾರವಾಡ ಮತ್ತು ಗುಲ್ಬರ್ಗಾ ಸಂಚಾರಿ ಪೀಠಗಳಿಗೆ ವಿವಿಧ ವೃಂದಗಳ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂ: ಹೆಚ್‌ಸಿಇ/258/2008, ದಿನಾಂಕ 14–2–2008.

**ಪ್ರಸ್ತಾವನೆ :**

ರಿಜಿಸ್ಟ್ರಾರ್ ಜನರಲ್ ಕರ್ನಾಟಕ ಉಚ್ಚ ನ್ಯಾಯಾಲಯ ಇವರು ಮೇಲೆ ಓದಲಾದ ಪತ್ರದಲ್ಲಿ ಧಾರವಾಡ ಮತ್ತು ಗುಲ್ಬರ್ಗಾ ಸಂಚಾರಿ ಪೀಠಗಳನ್ನು ಶೀಘ್ರದಲ್ಲಿಯೇ ಪ್ರಾರಂಭಿಸಲಾಗುವುದೆಂದು ಈ ಪೀಠಗಳಿಗೆ ಅವಶ್ಯಕವಿರುವ ವಿವಿಧ

ವೃಂದದ ಸಿಬ್ಬಂದಿಯನ್ನು ಸೃಜಿಸುವ ಅವಶ್ಯಕತೆಯಿದೆಯೆಂದು ತಿಳಿಸಿ, ಈ ಹುದ್ದೆಗಳನ್ನು ಉಚ್ಚ ನ್ಯಾಯಾಲಯದ ವೃಂದ ಬಲಕ್ಕೆ ಹೆಚ್ಚುವರಿಯಾಗಿ ಸೇರ್ಪಡೆ ಮಾಡಲಾಗುವುದೆಂದು ತಿಳಿಸುತ್ತಾ ಧಾರವಾಡ ಮತ್ತು ಗುಲ್ಬಗಾ ಸಂಚಾರಿ ಪೀಠಗಳಿಗೆ ವಿವಿಧ ವೃಂದದ ಹುದ್ದೆಗಳನ್ನು ಸೃಜಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸೇಉನ್ಯಾ 2008, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ಉಚ್ಚ ನ್ಯಾಯಾಲಯದ ಧಾರವಾಡ ಮತ್ತು ಗುಲ್ಬರ್ಗಾ ಸಂಚಾರಿ ಪೀಠಗಳಿಗೆ ಅನುಬಂಧದಲ್ಲಿ ತೋರಿಸಿರುವಂತೆ ವಿವಿಧ ವೃಂದಗಳ ತಲಾ 227 ಹುದ್ದೆಗಳನ್ನು ಸೃಜಿಸಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ 239 ವೆಚ್ಚ–7/2008, ದಿನಾಂಕ 16–4–2008ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಅನುಬಂಧ**

**ಸರ್ಕಾರದ ಆದೇಶ ಸಂ: ಸಿಆಸುಇ 11 ಸೇಉನ್ಯಾ 2008, ದಿನಾಂಕ 30–4–208**

**STATEMENT SHOWING IMMEDIATE REQUIREMENT OF ADDITIONAL POSTS FOR THE CIRCUIT BENCH AT DHARWAD AND GULARBARGA**

**Total 227 Posts to each Bench**

| Sl. No. | Nomenclature of the Post | No. of Posts required to be created |
|---|---|---|
| 1 | Additional Registrar General | 1 |
| 2 | Deputy Registrar | 2 |
| 3 | Assistant Registrar | 6 |
| 4 | Section Officer | 16 |
| 5 | Court Officer | 5 |
| 6 | Senior Judgment Writer | 5 |
| 7 | Deputy Librarian | 1 |
| 8 | Software Technician | 1 |
| 9 | Hardware Engineer | 1 |
| 10 | Senior Assistant | 16 |
| 11 | Assistant Court Officer | 5 |
| 12 | Judgment Writer | 5 |
| 13 | First Division Assistant | 25 |
| 14 | Stenographer | 12 |
| 15 | Second Division Assistant | 35 |
| 16 | Typist | 32 |
| 17 | Assistant Librarian | 2 |
| 18 | Library Assistant | 2 |
| 19 | Drivers | 5 |
| 20 | Attender | 10 |
| 21 | Jamedar | 5 |
| 22 | Peon | 30 |

| | | |
|---|---|---|
| 23 | Seavenger | 5 |
| | **Total** | **227** |

**M.S. SHIVARAM**

P.R. 723

Under Secretary to Government,
D.P.A.R. (Services-3)

**ಕಂದಾಯ ಸಚಿವಾಲಯ**

**ವಿಷಯ :** ತಾಲೂಕು ಪುನರ್ ರಚನಾ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರುಗಳಿಗೆ ಗೌರವಧನ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ. ಕಂಇ 28 ಭೂದಾಪು 2007, ದಿ: 29–8–2007.
2. ಸರ್ಕಾರದ ಆದೇಶ ಸಂ. ಕಂಇ 28 ಭೂದಪು 2007, ದಿ: 5–10–2007.
3. ಸರ್ಕಾರದ ಆದೇಶ ಸಂ. ಕಂಇ 28 ಭೂದಾಪು 2007, ದಿ: 14–11–2007.
4. ಸದಸ್ಯ ಕಾರ್ಯದರ್ಶಿ, ತಾಲ್ಲೂಕು ಪುನರ್ ರಚನಾ ಸಮಿತಿ ಮತ್ತು ನೋಂದಣಿ ಮಹಾ ಪರಿವೀಕ್ಷಕರು/ ಮುದ್ರಾಂಕ ಅಯುಕ್ತರು, ಬೆಂಗಳೂರು ಇವರ ಪತ್ರ ಸಂ. ತಾಪುಸ–1– ಆಡಳಿತ–2007 ದಿ: 15–11–2007.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 29–8–2007ರಲ್ಲಿ ರಾಜ್ಯದಲ್ಲಿ ಹೊಸ ತಾಲ್ಲೂಕುಗಳ ಪುನರ್ ರಚನೆ ಮಾಡುವ ಬಗ್ಗೆ ಅಧ್ಯಯನ ನಡೆಸಿ ವರದಿ ಸಲ್ಲಿಸಲು ಒಬ್ಬ ಅಧ್ಯಕ್ಷರು ಮತ್ತು 4 ಜನ ಸದಸ್ಯರಿರುವ ತಾಲ್ಲೂಕು ಪುನರ್‌ರಚನಾ ಸಮಿತಿ ರಚಿಸಲಾಗಿತ್ತು. ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 5–10–2007ರಲ್ಲಿ ಹೊಸ ತಾಲ್ಲೂಕುಗಳ ಪುನರ್ ರಚನಾ ಸಮಿತಿಗೆ ಈ ಕೆಳಕಂಡ ತಜ್ಞರನ್ನು ನೇಮಿಸಿ ಆದೇಶಿಸಲಾಗಿರುತ್ತದೆ.

| | | |
|---|---|---|
| 1 | ಶ್ರೀ ಎಂ.ಬಿ. ಪ್ರಕಾಶ್, ಐ.ಎ.ಎಸ್. (ನಿವೃತ್ತ) | ಅಧ್ಯಕ್ಷರು |
| 2 | ಶ್ರೀ ಚಿರಂಜೀವಿಸಿಂಗ್, ಐ.ಎ.ಎಸ್. (ನಿವೃತ್ತ) | ಸದಸ್ಯರು |
| 3 | ಶ್ರೀ ಕೃಷ್ಣಕುಮಾರ್, ಐ.ಎ.ಎಸ್. (ನಿವೃತ್ತ) | ಸದಸ್ಯರು |
| 4 | ಶ್ರೀ ಹೆಚ್.ಕೆ. ಶಿವಾನಂದ, ಐ.ಎ.ಎಸ್. (ನಿವೃತ್ತ) | ಸದಸ್ಯರು |
| 5 | ಶ್ರೀ ಹೆಚ್. ಶಶಿಧರ್, ಐ.ಎ.ಎಸ್. (ಪ್ರಸ್ತುತ ನೋಂದಣಿ ಮಹಾ ಪರಿವೀಕ್ಷಕರು) | ಸದಸ್ಯ ಕಾರ್ಯದರ್ಶಿ |

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶ ದಿ: 14–11–2007ರಲ್ಲಿ ತಾಲ್ಲೂಕು ಪುನರ್ ರಚನಾ ಸಮಿತಿಯ ವೆಚ್ಚಾಕ್ಕಗಿ ಅಗತ್ಯವಿರುವ ರೂ. 50.00 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶಿಸಲಾಗಿರುತ್ತದೆ.

ಸದಸ್ಯ ಕಾರ್ಯದರ್ಶಿ ತಾಲ್ಲೂಕು ಪುನರ್ ರಚನಾ ಸಮಿತಿ ಮತ್ತು ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕ ಆಯುಕ್ತರು ಮೇಲೆ ಓದಲಾದ (4)ರ ದಿನಾಂಕ 15–11–2007ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿದ್ದು, ತಾಲ್ಲೂಕು ಪುನರ್ ರಚನಾ ಸಮಿತಿಯ ಅಧ್ಯಕ್ಷರು ಈ ಹಿಂದೆ ಕರ್ನಾಟಕ ರಾಜ್ಯ 5ನೇ ವೇತನ ಆಯೋಗದ ಅಧ್ಯಕ್ಷರಾಗಿದ್ದಾಗ ಅವರಿಗೆ ಕೇಂದ್ರ ಚುನಾವಣಾ ಆಯುಕ್ತರ ಸ್ಥಾನಮಾನ ನೀಡಿ ಅವರ ವೇತನ ಭತ್ಯೆ ಮತ್ತು ಇತರೆ ಸೌಲಭ್ಯಗಳನ್ನು ನಿಗಧಿಪಡಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಇದನ್ನು ಪರಿಗಣಿಸಿ ಸಮಿತಿಯ ಅಧ್ಯಕ್ಷರಿಗೆ ರೂ. 45,000/– ಮಾಹೆಯಾನ ಗೌರವಧನ ಹಾಗೂ ಸದಸ್ಯರುಗಳಿಗೆ ಮಾಹೆಯಾನ ರೂ. 42,000/– ಮಂಜೂರು ಮಾಡಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 63 ಭೂದಾಪು 2007, ಬೆಂಗಳೂರು, ದಿನಾಂಕ: 14ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ತಾಲ್ಲೂಕು ಪುನರ್ ರಚನಾ ಸಮಿತಿಯ ಅಧ್ಯಕ್ಷರವರಿಗೆ ಮಾಹೆಯಾನ ರೂ. 45,000–00 (ನಲ್ವತ್ತೈದು ಸಾವಿರ ರೂಪಾಯಿಗಳು ಮಾತ್ರ) ಮತ್ತು ಉಳಿದ ಮೂರು ಸದಸ್ಯರುಗಳಿಗೆ ತಲಾ ಮಾಹೆಯಾನ ರೂ. 42,000–00 (ನಲ್ವತ್ತೆರಡು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ನೀಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1366 ವೆಚ್ಚ 7/07, ದಿನಾಂಕ 5–1–2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.144

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಾಪನ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ (ನಿವೃತ್ತ) ಇವರ ವಿರುದ್ಧ ಇಲಾಖಾ ವಿಚಾರಣೆ ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂ: ಸಿಆಸುಇ 44 ಎಸ್ಇಎನ್ 06, ದಿ: 30–6–07.
2. ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್. ಅಧಿಕಾರಿ (ನಿವೃತ್ತ) ರವರ ಲಿಖಿತ ಹೇಳಿಕೆ ದಿ: 3–7–07.

**ಪ್ರಸ್ತಾವನೆ :**

ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ (ನಿವೃತ್ತ) ಇವರು ತುಮಕೂರು ಜಿಲ್ಲಾ ಪಂಚಾಯತ್‌ನಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, 2004–05ನೇ ಸಾಲಿನಲ್ಲಿ ಸಾಮಾನ್ಯ ವರ್ಗಾವಣೆಯ ಅವಧಿ ಮುಗಿದ ನಂತರವೂ 14 ಮಂದಿ ಬೋಧಕೇತರ ನೌಕರರ ಶಿಕ್ಷಕರುಗಳ, ಪತ್ರಾಂಕಿತ ವ್ಯವಸ್ಥಾಪಕರುಗಳ ವರ್ಗಾವಣೆಯನ್ನು ಮಾಡಿರುವ ವೃಂದ ನಿರ್ವಹಣಾ ಪ್ರಾಧಿಕಾರದ ಸರ್ವ ಸದಸ್ಯರ ಅನುಮೋದನೆಯಿಲ್ಲದೆ ನೇರವಾಗಿ ವರ್ಗಾವಣಾ ಆದೇಶಗಳನ್ನು ವರ್ಗಾವಣಾ ಅವಧಿ ಮುಗಿದ ನಂತರ ಹೊರಡಿಸುವ ಮೂಲಕ ವರ್ಗಾವಣಾ ಆದೇಶಗಳನ್ನು ಹೊರಡಿಸುವ ಪ್ರಾಧಿಕಾರದಲ್ಲಿ ಹಸ್ತಕ್ಷೇಪವೆಸಗಿ ಅಧಿಕಾರ ದುರುಪಯೋಗಪಡಿಸಿಕೊಂಡಿರುವ ಹಾಗೂ 2004–05ನೇ ಸಾಲಿನಲ್ಲಿ ತುಮಕೂರು ಜಿಲ್ಲಾ ಪಂಚಾಯತ್ ವ್ಯಾಪ್ತಿಯೊಳಗೆ ಬರುವ ತುಮಕೂರು ಉತ್ತರ, ಮಧುಗಿರಿಯಲ್ಲಿ ಮತ್ತು ತುಮಕೂರು ದಕ್ಷಿಣ, ತುಮಕೂರು ಜಿಲ್ಲೆಯಲ್ಲಿ ಅನುಕ್ರಮವಾಗಿ 23 ಮತ್ತು 9 ಮಂದಿ ಪ್ರಾಥಮಿಕ ಶಾಲಾ ಶಿಕ್ಷಕರುಗಳನ್ನು ನಿಯಮ ಬಾಹಿರವಾಗಿ ನಿಯೋಜನೆ ಮಾಡಿರುವ ಆರೋಪಗಳ ಸಂಬಂಧ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಶಿಕ್ಷಣ ಇಲಾಖೆಯು ಕೋರಿತ್ತು. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂ (1)ರ ಆದೇಶದಲ್ಲಿ ಸದರಿ ಅಧಿಕಾರಿಗೆ ಸಿಸಿಎ ನಿಯಮಾವಳಿಗಳ ನಿಯಮ (11)ರಡಿ ನೋಟೀಸ್ ಜಾರಿ ಮಾಡಿ ಅವರು ಎಸಗಿರುವ ದುರ್ನಡತೆಯ ಬಗ್ಗೆ ವಿವರಣೆ ಕೋರಲಾಗಿತ್ತು. ಅದರಂತೆ ಸರ್ಕಾರದಿಂದ ಜಾರಿಗೊಳಿಸಲಾದ ನೋಟೀಸ್‌ಗೆ ಸದರಿಯವರು ಮೇಲೆ ಓದಲಾದ ಕ್ರಮ ಸಂ: (2)ರ ದಿ: 3–7–07 ಪತ್ರದಲ್ಲಿ ಲಿಖಿತ ಉತ್ತರ ನೀಡಿ ಮಾನ್ಯ ಮುಖ್ಯಮಂತ್ರಿಗಳು, ನೀಡಿರುವ ಆದೇಶದಂತೆ ಹಾಗೂ ಸಚಿವರ/ ಜಿಲ್ಲಾ ಶಾಸಕರ/ ಜಿ.ಪಂ. ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರಿಂದ ಬಂದಿರುವ ಶಿಫಾರಸ್ಸುಗಳ ಆಧಾರದ ಮೇಲೆ ಹಾಗೂ ತುಮಕೂರು ಜಿ.ಪಂ.ನ ಸರ್ವ ಸದಸ್ಯರ ಸಭೆಯಲ್ಲಿ ತೆಗೆದುಕೊಂಡ ನಿರ್ಣಯಗಳನ್ವಯ ಸಾರ್ವಜನಿಕ ಹಿತದೃಷ್ಟಿಯಿಂದ ಅವಧಿಪೂರ್ವ ವರ್ಗಾವಣೆಯನ್ನು ಜಾರಿಗೊಳಿಸಿರುವುದಾಗಿ ತಿಳಿಸುತ್ತಾ, ತಮ್ಮ ವಿರುದ್ಧ ಮಾಡಲಾಗಿರುವ ಆರೋಪಗಳನ್ನು ಕೈಬಿಟ್ಟು ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ಕೋರಿರುತ್ತಾರೆ. ಈ ಉತ್ತರದ ಹಿನ್ನಲೆಯಲ್ಲಿ ಶಿಕ್ಷಣ ಇಲಾಖೆಯು ಅಭಿಪ್ರಾಯ ಪಡೆದಿದ್ದು, ಅಂದಿನ ಮಾನ್ಯ ಮುಖ್ಯ ಮಂತ್ರಿಗಳು ನೀಡಿರುವ ಆದೇಶ ಹಾಗೂ ತುಮಕೂರು ಜಿಲ್ಲಾ ಪಂಚಾಯತಿಯ ಸರ್ವ ಸದಸ್ಯರ ಸಭೆಯಲ್ಲಿ ತೆಗೆದುಕೊಂಡ ಸರ್ವಾನುಮತ ನಿರ್ಣಯಗಳನ್ವಯ ಸದರಿ ಅಧಿಕಾರಿಯವರು 2004–05ನೇ ಸಾಲಿನಲ್ಲಿ ಕೆಲವು ಬೋಧಕೇತರ ಸಿಬ್ಬಂದಿಗಳ ಅವಧಿ ಪೂರ್ವ ಬದಲಾವಣೆ/ ಮಾರ್ಪಾಟುಗಳನ್ನು ಜಾರಿಗೊಳಿಸಿರುವುದರಿಂದ ಹಾಗೂ ಮಾನ್ಯ ಮುಖ್ಯಮಂತ್ರಿಗಳ ಹಾಗೂ ಇತರೇ ಗಣ್ಯವ್ಯಕ್ತಿಗಳಿಂದ ಬಂದಿರುವ ಶಿಫಾರಸ್ಸುಗಳ ಆಧಾರದ ಮೇಲೆ ಸಾರ್ವಜನಿಕ ಹಿತದೃಷ್ಟಿಯಿಂದ 2004–05ನೇ ಸಾಲಿನಲ್ಲಿ ಕೆಲವು ಭೋದಕೇತರ ಸಿಬ್ಬಂದಿ ಹಾಗೂ ಶಿಕ್ಷಕರುಗಳ ವರ್ಗಾವಣೆ ಹಾಗೂ ನಿಯೋಜನೆಗಳನ್ನು ಮಾಡಿರುವುದಾಗಿ ಹಾಗೂ ಈ ಪ್ರಕ್ರಿಯೆಯಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಆಗಿರುವುದು ಕಂಡು ಬಾರದ ಕಾರಣ ಮತ್ತು ಈ ಬಗ್ಗೆ ಸಾರ್ವಜನಿಕರಿಂದ ಯಾವುದೇ ದೂರುಗಳು:ಆಕ್ಷೇಪಣೆ ಬಾರದ ಕಾರಣ ಇವರ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ವಿಚಾರಣೆ ಮುಂದುವರೆಸುವ ಅಗತ್ಯ ಕಂಡು ಬರುವುದಿಲ್ಲವೆಂದು ಶಿಕ್ಷಣ ಇಲಾಖೆಯು ತಿಳಿಸಿರುವ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 136 ಕೆಇವಿ 07, ಬೆಂಗಳೂರು, ದಿನಾಂಕ: 3ನೇ ಮೇ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ (ನಿವೃತ್ತ), ಅವರನ್ನು ದಿ: 30–6–07ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸಿ ಪ್ರಕರಣವನ್ನು ಮುಕ್ತಾಯಗೊಳಿಸಲಾಗಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಇವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 767

**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು–2)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಆರ್. ಶ್ರೀನಿವಾಸರಾಜು, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಯ, ಚಿಕ್ಕಬಳ್ಳಾಪುರ ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ನಂ. ಲಾ 193 ಪಿಪಿಇ 2003, ದಿನಾಂಕ 6–5–2004.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ಸಿಶಾ.1/ 40 2007–08, ದಿನಾಂಕ 29–11–2007.

**ಪ್ರಸ್ತಾವನೆ :**

ಶ್ರೀ ಆರ್. ಶ್ರೀನಿವಾಸರಾಜು, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿಕ್ಕಬಳ್ಳಾಪುರ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ 6–5–2004ರ (ಕ್ರ.ಸಂ.18) ಅಧಿಸೂಚನೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ 17–5–2004ರ ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಅಧಿಕಾರಿಯು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ಹುದ್ದೆಗೆ ನಿಗಧಿಪಡಿಸಿದ್ದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗದೇ ಇರುವುದರಿಂದ, ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿದೆ ಎಂದು ಘೋಷಿಸಲು ಸಾಧ್ಯವಿರುವುದಿಲ್ಲ. ಸದರಿ ಅಧಿಕಾರಿಯವರು ನಿಗಧಿತ ಇಲಾಖಾ ಪರೀಕ್ಷೆಗಳಲ್ಲಿ ಅಂತಿಮವಾಗಿ ದಿನಾಂಕ 2–8–2007ರಂದು ಉತ್ತೀರ್ಣಗೊಳಿಸಿರುವುದರಿಂದ (ಪರೀಕ್ಷಾ ಫಲಿತಾಂಶ ಪ್ರಕಟವಾದ ಕರ್ನಾಟಕ ರಾಜ್ಯಪತ್ರ ದಿನಾಂಕ) ದಿನಾಂಕ 17–5–2006 ರಿಂದ ದಿನಾಂಕ 2–8–2007ರವರೆಗೆ ಕರ್ನಾಟಕ ಸರ್ಕಾರಿ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(II)ರ ರೀತ್ಯಾ ವಿಸ್ತರಣೆ ಮಾಡಬಹುದಾಗಿದೆ ಎಂದು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 573 ಪಿಪಿಇ 2007, ಬೆಂಗಳೂರು, ದಿನಾಂಕ: 13ನೇ ಮೇ 2008.**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವೆಗಳು (ಪರಿವೀಕ್ಷಣಾ) ನಿಯಮಗಳು 1977ರ 4ನೇ ನಿಯಮದ ಉಪ ನಿಯಮ (1)ರನ್ವಯ ಶ್ರೀ ಆರ್. ಶ್ರೀನಿವಾಸರಾಜು, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿಕ್ಕಬಳ್ಳಾಪುರ ಅವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 17–5–2006 ರಿಂದ 2–8–2007ರವರೆಗೆ ವಿಸ್ತರಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 774

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ: ಸಿಆಸುಇ 143 ಎಸ್‌ಇಎನ್ 06, ದಿ: 11–6–2007.
2. ವಿಚಾರಣಾಧಿಕಾರಿ ರವರ ವರದಿ ದಿ: 24–10–07.
3. ವಿಚಾರಣಾಧಿಕಾರಿ ರವರ ಮನವಿ ದಿ: 24/31–10–07.

**ಪ್ರಸ್ತಾವನೆ :**

ಮೇಲೆ ಕ್ರಮ ಸಂ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಸ್.ಎನ್. ನಾಗರಾಜ್, ಕೆ.ಎ.ಎಸ್. (ಆ.ಶ್ರೇ) ಅಧಿಕಾರಿ ರವರು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಜಿಲ್ಲಾ ಪರಿಷತ್ ಮಾಜಿ ಅಧ್ಯಕ್ಷರು, ಮೈಸೂರು ಸಿಟಿಯ ಡಾ: ರಾಜ್‌ಕುಮಾರ್ ರಸ್ತೆ ಕಾಮಗಾರಿಯು ಸ್ಥಗಿತಗೊಂಡಿರುವ ಬಗ್ಗೆ ಚರ್ಚಿಸಲು ಹೋದಾಗ ಸರ್ಕಾರದ ಬಗ್ಗೆ ಅನುಚಿತವಾಗಿ ಮಾತನಾಡಿ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿದ ಆರೋಪ. ಶಾಂತವೇರಿ ಗೋಪಾಲಗೌಡ ಬಡಾವಣೆಗೆ ಮೂಲಭೂತ ಸೌಕರ್ಯ ಒದಗಿಸುವ ಸಂಬಂಧ ಎಸ್.ಆರ್. ದರಕ್ಕಿಂತ ಶೇ. 18.50 ಹೆಚ್ಚುವರಿಯಾಗಿ ಗುತ್ತಿಗೆ ನೀಡಿ ಪ್ರಾಧಿಕಾರಕ್ಕೆ ನಷ್ಟ ಉಂಟಾಗಲು ಕಾರಣರಾದ ಆರೋಪ. ಲಾಲ್‌ಬಹದ್ದೂರ್ ಶಾಸ್ತ್ರಿ ನಗರ ಬಡಾವನೆಗೆ ಮೂಲಭೂತ ಸೌಕರ್ಯ ಒದಗಿಸುವ ಸಂಬಂಧ ಎಸ್.ಆರ್. ದರಕ್ಕಿಂತ ಶೇ. 18.50 ಹೆಚ್ಚುವರಿಯಾಗಿ ಗುತ್ತಿಗೆ

ನೀಡಿ ಪ್ರಾಧಿಕಾರಕ್ಕೆ ನಷ್ಟ ಉಂಟಾಗಲು ಕಾರಣರಾದ ಆರೋಪ ಹಾಗೂ ಗಂಗೋತ್ರಿ ಬಡಾವಣೆಯ ಯೂತ್ ಹಾಸ್ಟೆಲಿಗೆ ಹೊಂದಿಕೊಂಡಿರುವ ಜಾಗವನ್ನು ಆಂಜನೇಯ ಟ್ರಸ್ಟ್ ಅವರಿಗೆ ರೂ. 16,445/- ವಾರ್ಷಿಕ ಗುತ್ತಿಗೆಗೆ ನೀಡಬೇಕಾಗಿದ್ದು ರೂ. 10,42,445/- ವಾರ್ಷಿಕ ದರ ನಿಗಧಿಪಡಿಸಿ ಪ್ರಾಧಿಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವ ಆರೋಪಗಳ ಕುರಿತು ವಿಚಾರಣೆ ನಡೆಸಲು ಮೇಲೆ ಓದಲಾದ ಉಲ್ಲೇಖ (1) ಸರ್ಕಾರಿ ಆದೇಶದಲ್ಲಿ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈ ಪ್ರಕಣದಲ್ಲಿ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ: (2)ರಲ್ಲಿ ಓದಲಾದ ದಿನಾಂಕ: 24-10-07ರಲ್ಲಿ ವಿಚಾರಣೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂ (3)ರಲ್ಲಿ ಓದಲಾದ ಮನವಿಯಲ್ಲಿ ವಿಚಾರಣಾಧಿಕಾರಿಯವರು ವಿಚಾರಣೆಯನ್ನು ನಡೆಸಿರುವ ಸಂಬಂಧ ಗೌರವಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 143 ಎಸ್‌ಇಎನ್ 06(ಸಿಆಸುಇ 165 ಕೆಇವಿ 07)ಬೆಂಗಳೂರು, ದಿನಾಂಕ:13ನೇ ಮೇ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರಿಗೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂ. ಸಿಆಸುಇ 16 ಸೇಇಪಿ 05, ದಿ: 23-8-05ರನ್ವಯ ರೂ. 6000.00 (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂ: ಸಿಆಸುಇ 45 ಸೇಇಸಿ 01, ದಿ: 4-3-02ರನ್ವಯ ರೂ. 1000.00 (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ ಪ್ರಯಾಣ ಭತ್ಯೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕಶೀರ್ಷಿಕೆ 2052-ಸಚಿವಾಲಯ-ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರ ಸಚಿವಾಲಯ-051-ಸಾಮಾನ್ಯ ವೆಚ್ಚಗಳು ರಡಿ ಭರಿಸತಕ್ಕದ್ದು.

ಭಾರತದ ರಾಷ್ಟ್ರಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.789

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-2)

**ಒಳಾಡಳಿತ ಸಚಿವಾಲಯ**

**ವಿಷಯ :** ಮಡಿಕೇರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಎಸ್.ಸಿ. 15/01ರಲ್ಲಿ ಎಸಗಿರುವ ಲೋಪಕ್ಕೆ ಸಂಬಂಧಿಸಿದಂತೆ ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರ ವಿರುದ್ಧ ಇಲಾಖಾ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ ಕೆಡಿಜೆ/299/2003, ದಿನಾಂಕ 22-4-2006.
2. ಕಾರಣ ಕೇಳುವ ತಿಳುವಳಿಕೆ ಪತ್ರಗಳ ಸಂಖ್ಯೆ: ಲಾ 222 ಎಲೆಂಸಿ 2002, ದಿ: 17-9-2007.
3. ಸದರಿ ಅಧಿಕಾರಿಯವರ ಸಮಜಾಯಿಷಿ ಪತ್ರ ದಿನಾಂಕ 16-10-2007.

**ಪ್ರಸ್ತಾವನೆ :**

ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರು ಮಡಿಕೇರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸದರಿ ನ್ಯಾಯಾಲಯದ ಎಸ್.ಸಿ. ಸಂಖ್ಯೆ 15/01ರ ಪ್ರಕರಣದ ವಿಚಾರಣೆ ನಡೆಸುವ ಸಂದರ್ಭದಲ್ಲಿ ಸದರಿ ಪ್ರಕರಣದ ಪ್ರಮುಖ ಸಾಕ್ಷಿಯಾದ ಚಾ.ಸಾ. 9ರವರನ್ನು ವಿಚಾರಣೆ ಮಾಡದೇ ಕರ್ತವ್ಯ ನಿರ್ಲಕ್ಷ್ಯ ತೋರಿಸಿದ ಸಂಬಂಧ ಕರ್ನಾಟಕ ಸರ್ಕಾರ ಸೇವಾ (ನಡತೆ) ನಿಯಮ 1966ರ ನಿಯಮ 3(1) ಉಪ ನಿಯಮ (11) ಮತ್ತು (111)ಗಳನ್ನು ಸ್ಪಷ್ಟವಾಗಿ ಉಲ್ಲಂಘಿಸಿದ ಆರೋಪದ ಬಗ್ಗೆ ಮೇಲೆ (1)ರಲ್ಲಿ ಓದಲಾಗಿರುವ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು ಇವರಿಗೆ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ದೋಷಾರೋಪಣ ಪಟ್ಟಿ ಅನುಬಂಧ-1 ರಿಂದ 4ರ ವರೆಗೆ ಜಾರಿ ಮಾಡಿ ತಮ್ಮ ಮೇಲಿನ ಆಪಾದನೆಗಳನ್ನು ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾಗಿರುವ ಕಾರಣ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಮೇಲೆ (3)ರಲ್ಲಿ ಓದಲಾಗಿರುವ ಪತ್ರದಲ್ಲಿ ಆರೋಪಿತ ಅಧಿಕಾರಿಯು ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿ ಮುಂದಿನ ಕ್ರಮವನ್ನು ಕೈಬಿಡುವಂತೆ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಅವರುಗಳ ಮೇಲೆ ಹೊರಿಸಲಾದ

ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 945 ಪಿಪಿಇ 2005 ಬೆಂಗಳೂರು, ದಿನಾಂಕ: 29ನೇ ಏಪ್ರಿಲ್ 2008.**

ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ಮಾಡಲಾಗಿರುವ ಆಪಾದನೆಗಳ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ನಿಯಮ 11ರ ಇಲಾಖಾ ವಿಚಾರಣೆಯನ್ನು ನಡೆಸಲು ನಿಯಮ (2)ರ ಅಡಿಯಲ್ಲಿ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರು (ಜಿಲ್ಲಾ ಮತ್ತು ಸತ್ರ ನ್ಯಾಯಾಲಯ), ಸಂಖ್ಯೆ 768, 9ನೇ ಮೈನ್, 3ನೇ ಬ್ಲಾಕ್, 3ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು–79 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಪ್ರಕರಣದ ದಾಖಲೆಗಳನ್ನು ಸರ್ಕಾರದ ಪರವಾಗಿ ವಿಚಾರಣಾ ಪ್ರಾಧಿಕಾರಿಯವರ ಮುಂದೆ ಮಂಡಿಸಲು ಮೇಲ್ಕಂಡ ನಿಯಮಗಳ ನಿಯಮ 11(5)(ಸಿ)ರ ಅನ್ವಯ ಶ್ರೀ ಟಿ.ಎಸ್. ಗೋಪಿನಾಥ್, ಸಹಾಯ ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು–9, ಇವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಇಲಾಖಾ ವಿಚಾರಣೆಯನ್ನು ಕೂಡಲೇ ಪ್ರಾರಂಭಿಸಿ ಮೂರು ತಿಂಗಳೊಳಗೆ ವಿಚಾರಣೆಯನ್ನು ಮುಕ್ತಾಯಗೊಳಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಭಾರತ ಸರ್ಕಾರದ ರಾಷ್ಟ್ರಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 775

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ. ಮತ್ತು ಸು ಕಾಫಿಮೋಸ ಮತ್ತು ಅಭಿಯೋಗ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ನೇರ ನೇಮಕಾತಿ ಸಹಾಯಕರು/ ಶೀಘ್ರಲಿಪಿಗಾರರು/ ಕಿರಿಯ ಸಹಾಯಕರು/ ಬೆರಳಚ್ಚುಗಾರರು ಪ್ರವೇಶ ತರಬೇತಿಗೆ ಹೊಸ ಪಠ್ಯ ಕ್ರಮ ನಿಗದಿಗೊಳಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ 7–4–1979ರ ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 4 ಕೆಟಿಐ 79.
2. ದಿನಾಂಕ 7–5–2007ರ ಕರ್ನಾಟಕ ಸರ್ಕಾರ ಸಚಿವಾಲಯ ತರಬೇತಿ ಸಂಸ್ಥೆಯ ವ್ಯವಸ್ಥಾಪಕ ಸಮಿತಿ ಸಭೆಯ ನಡವಳಿಗಳು.
3. ದಿನಾಂಕ 9–10–2007ರ ಸಂಖ್ಯೆ: ಸತಸಂ 29 ಸಿಸೇತ 2007, ನಿರ್ದೇಶಕರು, ಕರ್ನಾಟಕ ಸರ್ಕಾರ ಸಚಿವಾಲಯ ತರಬೇತಿ ಸಂಸ್ಥೆ, ಇವರ ಪತ್ರ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 7–4–1979ರ ಸರ್ಕಾರಿ ಆದೇಶದಲ್ಲಿ, ಸಚಿವಾಲಯದ ವಿವಿಧ ವೃಂದಗಳಿಗೆ ನಿಗದಿಗೊಳಿಸಲಾಗಿದ್ದ ದೀರ್ಘಾವಧಿ ತರಬೇತಿಯ ಪಠ್ಯ ಕ್ರಮದನ್ವಯ, ನೇರ ನೇಮಕಾತಿ ಸಹಾಯಕರುಗಳಿಗೆ ಸಚಿವಾಲಯ ತರಬೇತಿ ಸಂಸ್ಥೆಯಲ್ಲಿ 3 ತಿಂಗಳ ಪೂರ್ಣ ದಿನಗಳ ತರಬೇತಿಯೂ ಸೇರಿದಂತೆ 8 ತಿಂಗಳ ಪ್ರವೇಶ ತರಬೇತಿಯನ್ನು ನಿಗದಿಗೊಳಿಸಲಾಗಿತ್ತು. ಮೇಲೆ (2)ರಲ್ಲಿ ಓದಲಾದ ನಡವಳಿಯಲ್ಲಿ 3 ತಿಂಗಳ ಪೂರ್ಣ ಕಾಲಿಕ ತರಬೇತಿ ಅವಶ್ಯವಿಲ್ಲವೆಂದು ತೀರ್ಮಾನಿಸಿ, ನೇರ ನೇಮಕಾತಿ ಸಹಾಯಕರು/ ಶೀಘ್ರಲಿಪಿಗಾರರು/ ಕಿರಿಯ ಸಹಾಯಕರು/ ಬೆರಳಚ್ಚುಗಾರರು ಇವರ ಪ್ರವೇಶ ತರಬೇತಿಗೆ ಒಂದು ತಿಂಗಳ ಪೂರ್ಣ ದಿನಗಳ ಪಠ್ಯ ಕ್ರಮವನ್ನು ಅನುಮೋದಿಸಲಾಯಿತು.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ನೇರ ನೇಮಕಾತಿಯ ಶೀಘ್ರಲಿಪಿಗಾರರು/ ಕಿರಿಯ ಸಹಾಯಕರು/ ಬೆರಳಚ್ಚುಗಾರರಿಗೆ ನೀಡಬಹುದಾದ ತರಬೇತಿಯನ್ನು ಅರ್ಧ ದಿನ ತರಬೇತಿ ಅರ್ಧ ದಿನ ಕಛೇರಿಯ 1 ತಿಂಗಳ ತರಬೇತಿ ನೀಡಲು ಅಧಿಕಾರಿಗಳು ಸೂಚಿಸಿರುವುದರಿಂದ, ಈ ಮೂರು ವೃಂದದ ನೌಕರರಿಗೆ ತರಬೇತಿ ಅವಧಿಯನ್ನು ಅರ್ಧ ದಿನ ತರಬೇತಿ ಅರ್ಧ ದಿನ ಕಛೇರಿ ಎಂದು ನಿಗಧಿಗೊಳಿಸಿ ಆದೇಶ ಹೊರಡಿಸಬೇಕೆಂದು ಕರ್ನಾಟಕ ಸರ್ಕಾರ ಸಚಿವಾಲಯ ತರಬೇತಿ ಸಂಸ್ಥೆಯ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ನಿರ್ದೇಶಕರು, ಕರ್ನಾಟಕ ಸರ್ಕಾರ ಸಚಿವಾಲಯ ತರಬೇತಿ ಸಂಸ್ಥೆ, ಇವರ ಕೋರಿಕೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಸಿಆಸುಇ 40 ಇಭಾತ 2007, ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ 7–4–1979ರ ಆದೇಶ ಸಂಖ್ಯೆ: ಡಿಪಿಎಆರ್ 4 ಕೆಟಿಐ 79 ಅನ್ನು ಭಾಗಶಃ ಮಾರ್ಪಡಿಸಿ, ನೇರ ನೇಮಕಾತಿ ಸಹಾಯಕರ ಪ್ರವೇಶ ತರಬೇತಿಗೆ ಅನುಬಂಧ–1ರಲ್ಲಿ ಇರುವ ಪಠ್ಯ

ಕ್ರಮವನ್ನು ಮತ್ತು ನೇರ ನೇಮಕಾತಿ ಶೀಘ್ರಲಿಪಿಗಾರರು/ ಕಿರಿಯ ಸಹಾಯಕರು/ ಬೆರಳಚ್ಚುಗಾರರು ಪ್ರವೇಶ ತರಬೇತಿಗೆ ಅನುಬಂಧ–2ರಲ್ಲಿ ಇರುವ ಪಠ್ಯ ಕ್ರಮವನ್ನು ನಿಗಧಿಪಡಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ತರಬೇತಿ)

**ದಿನಾಂಕ 13ನೇ ಮಾರ್ಚ್ 2008ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಇಭಾತ 2007ಕ್ಕೆ ಅನುಬಂಧ–1**

**ಕರ್ನಾಟಕ ಸರ್ಕಾರ ಸಚಿವಾಲಯದ ನೇರ ನೇಮಕಾತಿ ಸಹಾಯಕರಿಗೆ "ಪ್ರವೇಶ ತರಬೇತಿ"**

**(Induction Training)**

**ಅವಧಿ: ಒಂದು ತಿಂಗಳು ಪೂರ್ಣ ದಿನಗಳು**

**ಪಠ್ಯಕ್ರಮ**

| ಕ್ರ.ಸಂ. | ವಿಷಯ | ಅವಧಿ |
|---|---|---|
| 1 | ಸಚಿವಾಲಯದ ಕೈಪಿಡಿ | 12 ಗಂಟೆ |
| 2 | ವ್ಯವಹಾರ ನಿರ್ವಹಣೆ ನಿಯಮಾವಳಿಗಳು | 2 ಗಂಟೆ |
| 3 | ವ್ಯವಹಾರ ಹಂಚಿಕೆ ನಿಯಮಾವಳಿಗಳು | 1 ಗಂಟೆ |
| 4 | ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು | 18 ಗಂಟೆ |
| 5 | ಕರ್ನಾಟಕ ಆರ್ಥಿಕ ಸಂಹಿತೆ | 6 ಗಂಟೆ |
| 6 | ಖಜಾನೆ ಸಂಹಿತೆ | 1½ ಗಂಟೆ |
| 7 | ಖಜಾನೆ ಇಲಾಖೆಯ ಎನ್.ಎಂ.ಸಿ.ಗೆ ಭೇಟಿ | 3 ಗಂಟೆ |
| 8 | ಸಾದಿಲ್ವಾರು ವೆಚ್ಚ ಕೈಪಿಡಿ | 1½ಗಂಟೆ |
| 9 | ಆಯವ್ಯಯ ವಿಷಯಗಳು | 3 ಗಂಟೆ |
| 10 | ಆಂತರಿಕ ಆರ್ಥಿಕ ಸಲಹೆಗಾರರೊಡನೆ ಸಮಾಲೋಚನೆ | 1½ ಗಂಟೆ |
| 11 | ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ | 3 ಗಂಟೆ |
| 12 | ಕ.ನಾ.ಸೇ. (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು, 1977 ಮತ್ತು ಮೀಸಲು ಪದ್ಧತಿ | 3 ಗಂಟೆ |
| 13 | ಕ.ನಾ.ಸೇ (ಅರ್ಹತಾ ಪರೀಕ್ಷಣೆ) ನಿಯಮಾವಳಿಗಳು, 1977 | 1 ಗಂಟೆ |
| 14 | ಕ.ಸ.ಸೇ (ಜೇಷ್ಠತೆ) ನಿಯಮಾವಳಿಗಳು, 1957 | 2 ಗಂಟೆ |
| 15 | ಭಾರತದ ಸಂವಿಧಾನ –ಭಾಗ 14 – ರಾಜ್ಯದಡಿ ಸೇವೆಗಳು | 3 ಗಂಟೆ |
| 16 | ಕ.ನಾ.ಸೇ. (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957 | 18 ಗಂಟೆ |
| 17 | ಲೋಕಸೇವಾ ಆಯೋಗ (ಸಮಾಲೋಚನೆ) ವಿನಿಮಯಗಳು ಮತ್ತು ಲೋಕಸೇವಾ ಆಯೋಗ (ಪ್ರಕಾರ್ಯಗಳು) ನಿಯಮಾವಳಿಗಳು | 1½ ಗಂಟೆ |
| 18 | ಕ.ನಾ.ಸೇ. (ನಡತೆ) ನಿಯಮಾವಳಿಗಳು, 1966 | 3 ಗಂಟೆ |
| 19 | ಕ.ಸ.ಸೇ (ವೈದ್ಯಕೀಯ ಹಾಜರಾತಿ) ನಿಯಮಾವಳಿಗಳು, 1963 | 3 ಗಂಟೆ |
| 20 | ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984; ಸಂಬಂಧಿಸಿದ ಭಾರತ ದಂಡ ಸಂಹಿತೆ ಮತ್ತು ಲಂಚ ತಡೆ ಕಾಯ್ದೆ ಭಾಗಗಳು | 3 ಗಂಟೆ |
| 21 | ನ್ಯಾಯಾಲಯ ವಿಷಯಗಳು–ರಿಟ್ ಅರ್ಜಿಗಳು, ಸಿವಿಲ್/ ಕ್ರಿಮಿನಲ್ ಕೇಸ್‌ಗಳು, ಕೆ.ಎ.ಟಿ. ವಿಷಯಗಳು ಮುಂತಾದವು | 3 ಗಂಟೆ |
| 22 | ಮಾನವ ಹಕ್ಕುಗಳು ಮತ್ತು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ | 1½ ಗಂಟೆ |
| 23 | ಮಾಹಿತಿ ಹಕ್ಕು | 3 ಗಂಟೆ |
| 24 | ವಿಧಾನ ಮಂಡಲದ ವಿಷಯಗಳು | 3 ಗಂಟೆ |
| 25 | ನಾಗರೀಕ ಸನ್ನದು | 3 ಗಂಟೆ |

| ಕ್ರ.ಸಂ. | ವಿಷಯ | ಅವಧಿ |
|---|---|---|
| 26 | ಲಿಂಗ ಸಂವೇದನೆ, ಹೆಂಗಸರ ಹಕ್ಕುಗಳು ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳ, ಮಹಿಳಾ ಆಯೋಗಗಳು, ಪುರುಷರಿಗೆ ಉಂಟಾಗುತ್ತಿರುವ ಕಿರುಕುಳ ಮುಂತಾದವು | 3 ಗಂಟೆ |
| 27 | ಜಿಲ್ಲಾ ಪಂಚಾಯತ್ ಅಧಿನಿಯಮ ಮತ್ತು ನಿಯಮಾವಳಿಗಳು | 6 ಗಂಟೆ |
| 28 | ಇ–ಆಡಳಿತ ಸಚಿವಾಲಯಕ್ಕೆ ಭೇಟಿ ಎಲ್.ಎಂ.ಎಸ್./ಎಫ್.ಎಂ.ಎಸ್. ಮುಂತಾದವು | 3 ಗಂಟೆ |
| 29 | ತರಬೇತಿ, ತರಬೇತಿ ಸಂಸ್ಥೆ, ಶಿಸ್ತು ಮುಂತಾದವುಗಳ ಬಗ್ಗೆ ಪ್ರಥಮದಿನ ಪರಿಚಯ; ಹೆಚ್ಚು ಸಮಯ ಕೇಳುವ ಸಂಪನ್ಮೂಲ ವ್ಯಕ್ತಿಗಳಿಗೆ ಅವಶ್ಯ ಹೆಚ್ಚುವರಿ ಸಮಯ ಒದಗಿಸಲು ಅವಕಾಶಕ್ಕಾಗಿ; ಯಾವುದೇ ವಿಷಯದಲ್ಲಿ ಹೆಚ್ಚು ಸಮಯಾವಕಾಶ ಕೇಳುವ ಪ್ರಶಿಕ್ಷಣಾರ್ಥಿಗಳ ಬೇಡಿಕೆ ಈಡೇರಿಸುವ ಅವಕಾಶಕ್ಕಾಗಿ; ಪ್ರಶಿಕ್ಷಣಾರ್ಥಿಗಳು ಕೇಳುವ ಯಾವುದೇ ವಿಷಯದಲ್ಲಿ ತರಬೇತಿ ಒದಗಿಸಲು ಅವಕಾಶಕ್ಕಾಗಿ; ಸಾಂದರ್ಭಿಕ ವಿಷಯಗಳು – ಮೇಲಿನ ಪಠ್ಯಕ್ರಮದಲ್ಲಿ ಸೇರದೆ ಇರುವ ಹೊಸ ಕಾನೂನು/ ನಿಯಮಗಳು/ ಸರ್ಕಾರದ ಕಾರ್ಯಕ್ರಮಗಳು/ ವ್ಯಕ್ತಿತ್ವ ಸಂಬಂಧಿ ವಿಷಯಗಳು/ ಕೋರ್ಟ್ ಆದೇಶಗಳು ಮುಂತಾದವುಗಳನ್ನು ಭರಿಸುವ ಅವಕಾಶಕ್ಕಾಗಿ; ಕೊನೆಯ ದಿನ ಪ್ರಶಿಕ್ಷಣಾರ್ಥಿ ಗುಂಪುಗಳಿಂದ ಕ್ಷೇತ್ರ ಸಂದರ್ಶನ ವರದಿ ಮಂಡನೆ, ಪ್ರಶಿಕ್ಷಣಾರ್ಥಿ ಗುಂಪುಗಳಿಂದ ತರಬೇತಿಯ ಮೌಲ್ಯ ಮಾಪನ, ಮುಕ್ತಾಯ, ಮುಂತಾದವುಗಳಿಗೆ ಅವಕಾಶ. | 22½ ಗಂಟೆ |
| | **ಒಟ್ಟು** | **138 ಗಂಟೆಗಳು ಅಥವಾ ಪ್ರತಿ ದಿನಕ್ಕೆ 6 ಗಂಟೆಯಂತೆ 23 ಕೆಲಸದ ದಿನಗಳು 3 ಪೂರ್ಣ ದಿನಗಳು** |
| 30 | ಕ್ಷೇತ್ರ ಸಂದರ್ಶನ (ಅವಶ್ಯವಿದ್ದರೆ ಸಾರ್ವತ್ರಿಕ ರಜಾದಿನಗಳನ್ನು ಸೇರಿಸಿಕೊಳ್ಳಬಹುದು) (ಐಚ್ಛಿಕ) | 3 ಪೂರ್ಣ ದಿನಗಳು |
| | **ಒಟ್ಟು** | **26 ಪೂರ್ಣ ಕೆಲಸದ ದಿನಗಳು** |

**ಕೆ.ಎಲ್. ರಾಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ತರಬೇತಿ)

**ದಿನಾಂಕ 13ನೇ ಮಾರ್ಚ್ 2008ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಇಭಾತ 2007ಕ್ಕೆ ಅನುಬಂಧ–2**
**ಕರ್ನಾಟಕ ಸರ್ಕಾರ ಸಚಿವಾಲಯದ ನೇರ ನೇಮಕಾತಿ ಶೀಘ್ರಲಿಪಿಗಾರರಿಗೆ/ ಕಿರಿಯ ಸಹಾಯಕರಿಗೆ / ಬೆರಳಚ್ಚುಗಾರರಿಗೆ "ಪ್ರವೇಶ ತರಬೇತಿ" (Induction Training)**

**ಪಠ್ಯಕ್ರಮ**

| ಕ್ರ.ಸಂ. | ವಿಷಯ | ಅವಧಿ |
|---|---|---|
| 1 | ಸಚಿವಾಲಯದ ಕೈಪಿಡಿ | 2 ಗಂಟೆ |
| 2 | ವ್ಯವಹಾರ ನಿರ್ವಹಣೆ ನಿಯಮಾವಳಿಗಳು | 2 ಗಂಟೆ |
| 3 | ವ್ಯವಹಾರ ಹಂಚಿಕೆ ನಿಯಮಾವಳಿಗಳು | 1 ಗಂಟೆ |
| 4 | ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು | 18 ಗಂಟೆ |
| 5 | ಕರ್ನಾಟಕ ಆರ್ಥಿಕ ಸಂಹಿತೆ | 3 ಗಂಟೆ |
| 6 | ಖಜಾನೆ ಸಂಹಿತೆ | 2 ಗಂಟೆ |
| 7 | ಸಾದಿಲ್ವಾರು ವೆಚ್ಚ ಕೈಪಿಡಿ | 1 ಗಂಟೆ |
| 8 | ಕ.ನಾ.ಸೇ. (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು, 1977 ಮತ್ತು ಮೀಸಲು ಪದ್ಧತಿ | 3 ಗಂಟೆ |

| ಕ್ರ.ಸಂ. | ವಿಷಯ | ಅವಧಿ |
|---|---|---|
| 9 | ಕ.ನಾ.ಸೇ (ಅರ್ಹತಾ ಪರೀಕ್ಷಣೆ) ನಿಯಮಾವಳಿಗಳು, 1977 | 1 ಗಂಟೆ |
| 10 | ಕ.ಸ.ಸೇ (ಜೇಷ್ಠತೆ) ನಿಯಮಾವಳಿಗಳು, 1957 | 2 ಗಂಟೆ |
| 11 | ಭಾರತದ ಸಂವಿಧಾನ –ಭಾಗ 14 – ರಾಜ್ಯದಡಿ ಸೇವೆಗಳು | 1 ಗಂಟೆ |
| 12 | ಕ.ನಾ.ಸೇ. (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957 | 2 ಗಂಟೆ |
| 13 | ಕ.ನಾ.ಸೇ. (ನಡತೆ) ನಿಯಮಾವಳಿಗಳು, 1966 | 3 ಗಂಟೆ |
| 14 | ಕ.ಸ.ಸೇ (ವೈದ್ಯಕೀಯ ಹಾಜರಾತಿ) ನಿಯಮಾವಳಿಗಳು, 1963 | 3 ಗಂಟೆ |
| 15 | ವಿಧಾನ ಮಂಡಲದ ವಿಷಯಗಳು | 3 ಗಂಟೆ |
| 16 | ಇ–ಆಡಳಿತ ಸಚಿವಾಲಯಕ್ಕೆ ಭೇಟಿ ಎಲ್.ಎಂ.ಎಸ್./ಎಫ್.ಎಂ.ಎಸ್. ಮುಂತಾದವು | 3 ಗಂಟೆ |
| 17 | ತರಬೇತಿ, ತರಬೇತಿ ಸಂಸ್ಥೆ, ಶಿಸ್ತು ಮುಂತಾದವುಗಳ ಬಗ್ಗೆ ಪ್ರಥಮದಿನ ಪರಿಚಯ; ಹೆಚ್ಚು ಸಮಯ ಕೇಳುವ ಸಂಪನ್ಮೂಲ ವ್ಯಕ್ತಿಗಳಿಗೆ ಅವಶ್ಯ ಹೆಚ್ಚುವರಿ ಸಮಯ ಒದಗಿಸಲು ಅವಕಾಶಕ್ಕಾಗಿ; ಯಾವುದೇ ವಿಷಯದಲ್ಲಿ ಹೆಚ್ಚು ಸಮಯಾವಕಾಶ ಕೇಳುವ ಪ್ರಶಿಕ್ಷಣಾರ್ಥಿಗಳ ಬೇಡಿಕೆ ಈಡೇರಿಸುವ ಅವಕಾಶಕ್ಕಾಗಿ; ಪ್ರಶಿಕ್ಷಣಾರ್ಥಿಗಳು ಕೇಳುವ ಯಾವುದೇ ವಿಷಯದಲ್ಲಿ ತರಬೇತಿ ಒದಗಿಸಲು ಅವಕಾಶಕ್ಕಾಗಿ; ಸಾಂದರ್ಭಿಕ ವಿಷಯಗಳು – ಮೇಲಿನ ಪಠ್ಯಕ್ರಮದಲ್ಲಿ ಸೇರದೆ ಇರುವ ಹೊಸ ಕಾನೂನು/ ನಿಯಮಗಳು/ ಸರ್ಕಾರದ ಕಾರ್ಯಕ್ರಮಗಳು/ ವ್ಯಕ್ತಿತ್ವ ಸಂಬಂಧಿ ವಿಷಯಗಳು/ ಕೋರ್ಟ್ ಆದೇಶಗಳು ಮುಂತಾದವುಗಳನ್ನು ಭರಿಸುವ ಅವಕಾಶಕ್ಕಾಗಿ; ಕೊನೆಯ ದಿನ ಪ್ರಶಿಕ್ಷಣಾರ್ಥಿ ಗುಂಪುಗಳಿಂದ ಕ್ಷೇತ್ರ ಸಂದರ್ಶನ ವರದಿ ಮಂಡನೆ, ಪ್ರಶಿಕ್ಷಣಾರ್ಥಿ ಗುಂಪುಗಳಿಂದ ತರಬೇತಿಯ ಮೌಲ್ಯ ಮಾಪನ, ಮುಕ್ತಾಯ, ಮುಂತಾದವುಗಳಿಗೆ ಅವಕಾಶ. | 12 ಗಂಟೆಗಳು ಅಥವಾ 4 ಅರ್ಧ ದಿನಗಳು |
| | **ಒಟ್ಟು** | **69 ಗಂಟೆ ಅಥವಾ 23 ಅರ್ಧ ದಿನಗಳು** |
| 18 | ಕ್ಷೇತ್ರ ಸಂದರ್ಶನ (ಅವಶ್ಯವಿದ್ದರೆ ಸಾರ್ವತ್ರಿಕ ರಜಾದಿನಗಳನ್ನು ಸೇರಿಸಿಕೊಳ್ಳಬಹುದು) (ಐಚ್ಛಿಕ) | 3 ಪೂರ್ಣ ದಿನಗಳು |
| | **ಒಟ್ಟು** | **23 ಅರ್ಧ ದಿನಗಳು + 3 ಪೂರ್ಣ ದಿನಗಳು** |

**ಕೆ.ಎಲ್. ರಾಮಚಂದ್ರ**

ಪಿ.ಆರ್. 498

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ತರಬೇತಿ)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀಮತಿ ಟಿ.ಎಂ. ಗಾಯಿತ್ರಿ, ಸರ್ಕಾರಿ ಅಭಿಯೋಜಕರು (ಅಭಿಯೋಗ ಉಪನಿರ್ದೇಶಕರು – ನಿಯೋಜನೆ) ಒಳಾಡಳಿತ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ವಿಧಾನಸೌಧ, ಬೆಂಗಳೂರು ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಅರ್ಹತಾದಾಯಕ ಸೇವೆಯ ಪರಿಗಣನೆ ಕುರಿತು.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ–I ನಂ. ಲಾ 15 ಪಿಪಿಇ 83, ದಿನಾಂಕ 27–1–1984.
2. ಸರ್ಕಾರದ ಆದೇಶ ನಂ. ಲಾ 77 ಪಿಪಿಇ 85, ದಿನಾಂಕ 16–5–1985.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 14–12–2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ಲೆಕ್ಕ–1/ 294/ 2007–08, ದಿನಾಂಕ 24–1–2008.

**ಪ್ರಸ್ತಾವನೆ :**

ಶ್ರೀಮತಿ ಟಿ.ಎಂ. ಗಾಯಿತ್ರಿ, ಸರ್ಕಾರಿ ಅಭಿಯೋಜಕರು (ಅಭಿಯೋಗ ಉಪನಿರ್ದೇಶಕರು –ನಿಯೋಜನೆ) ಒಳಾಡಳಿತ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ವಿಧಾನಸೌಧ, ಬೆಂಗಳೂರು ಇವರು ಮೇಲೆ ಓದಲಾದ (1)ರ

ಸರ್ಕಾರದ ಅಧಿಸೂಚನೆ ದಿನಾಂಕ 27-1-1984ರ ಕ್ರ.ಸಂ. 10ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ 6-2-1984ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 31-1-1952 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ದೃಢೀಕರಿಸಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 31-1-1952 ಆಗಿದ್ದು, ಅವರು ದಿನಾಂಕ 6-2-1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ ಅವರು 32 ವರ್ಷ 5ನೇ ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗುತ್ತದೆ. ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(ಎ)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಮಹಾಲೇಕಪಾಲರಿಗೆ ಶಿಫಾರಸ್ಸು ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀಮತಿ ಟಿ.ಎಂ. ಗಾಯಿತ್ರಿ, ಸರ್ಕಾರಿ ಅಭಿಯೋಜಕರು (ಅಭಿಯೋಗ ಉಪನಿರ್ದೇಶಕರು -ನಿಯೋಜನೆ) ಒಳಾಡಳಿತ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ವಿಧಾನಸೌಧ, ಬೆಂಗಳೂರು ಇವರು ದಿನಾಂಕ 6-2-1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ 31-1-1952 ಆಗಿದ್ದು, ಇವರು 32 ವರ್ಷ 5 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ನಿಯಮದ ಪ್ರಕಾರ ಎರಡು ವರ್ಷಗಳ ಸೇವೆಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ: ಒಇ 36 ಪಿಪಿಇ 2008, ಬೆಂಗಳೂರು, ದಿನಾಂಕ: 25ನೇ ಮಾರ್ಚ್ 2008.**

ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀಮತಿ ಟಿ.ಎಂ. ಗಾಯಿತ್ರಿ, ಸರ್ಕಾರಿ ಅಭಿಯೋಜಕರು, ಅಭಿಯೋಗ ಉಪನಿರ್ದೇಶಕರು -ನಿಯೋಜನೆ ಒಳಾಡಳಿತ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ವಿಧಾನಸೌಧ, ಬೆಂಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಎರಡು ವರ್ಷಗಳ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ನಂ. ಆಇ 205 ವೆಚ್ಚ-7/08, ದಿನಾಂಕ 11-3-2008ರ ಸಹಮತಿಯನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 550

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ. ಮತ್ತು ಸು. ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿನ ಆರ್ಥಿಕ ಆಯೋಗ ಕೋಶಕ್ಕೆ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ) ಇವರ ಅ.ಸ. ಪತ್ರ ಸಂಖ್ಯೆ: FD/Secy (Exp)/ 06/FCC/2007, ದಿನಾಂಕ 7-8-2007 ಮತ್ತು 19-10-2007.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 7-8-2007 ಮತ್ತು 19-10-2007ರ ಅ.ಸ. ಪತ್ರಗಳಲ್ಲಿ ಆರ್ಥಿಕ ಇಲಾಖೆಯ ಆರ್ಥಿಕ ಆಯೋಗ ಕೋಶಕ್ಕೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸುವಂತೆ ಆರ್ಥಿಕ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

1. ಅಧೀನ ಕಾರ್ಯದರ್ಶಿ -1 ಹುದ್ದೆ
2. ಶೀಘ್ರಲಿಪಿಗಾರರು -1 ಹುದ್ದೆ

ಅದರಂತೆ ಈ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 498 ಸಅಸೇ 2007, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2008.**

ಆರ್ಥಿಕ ಇಲಾಖೆಯ ಆರ್ಥಿಕ ಆಯೋಗ ಕೋಶಕ್ಕೆ ಈ ಕೆಳಕಂಡ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 13ನೇ ಆರ್ಥಿಕ ಆಯೋಗ ಪೂರ್ಣಗೊಳಿಸುವ ಅವಧಿಯವರೆಗೆ ಅಥವಾ ದಿನಾಂಕ 31–3–2015ರವರೆಗೆ ಯಾವುದು ಮೊದಲು ಅಲ್ಲಿಯವರೆಗೆ ಹುದ್ದೆಗಳನ್ನು ಸೃಜಿಸಲಾಗಿದೆ.

1. ಅಧೀನ ಕಾರ್ಯದರ್ಶಿ –1 ಹುದ್ದೆ
2. ಶೀಘ್ರಲಿಪಿಗಾರರು –1 ಹುದ್ದೆ

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 123 ವೆಚ್ಚ–5/2008, ದಿನಾಂಕ 7–3–2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 545

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**ಸಂಖ್ಯೆ ಸಿಆಸುಇ 133 ಎಸ್ಇಎನ್ 2004, ಬೆಂಗಳೂರು, ದಿನಾಂಕ 2ನೇ ಏಪ್ರಿಲ್ 2008**

**ತಿದ್ದೋಲೆ**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 133 ಎಸ್ಇಎನ್ 2004, ದಿನಾಂಕ 29–12–2007ರ ಆದೇಶ ಭಾಗದಲ್ಲಿ "ಕಾರ್ಯಪಾಲಕ ಅಭಿಯಂತರರು, ಕಬಿನಿ ಕಾಲುವೆ ವಿಭಾಗ, ಮೈಸೂರು" ಎಂದಿರುವುದನ್ನು "ಕಾರ್ಯಪಾಲಕ ಇಂಜಿನಿಯರ್, ಕಬಿನಿ ನಾಲಾ ವಿಭಾಗ, ನಂಜನಗೂಡು" ಎಂದು ದಿನಾಂಕ 29–12–2007ರಿಂದಲೇ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಮುಂದುವರಿದಂತೆ "ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ ಕಲ್ಪಿಸಲು ಹಾಗೂ ಸಿಬ್ಬಂದಿಗಳ ವ್ಯವಸ್ಥೆಗೆ ಮಾಡಲು ಶ್ರೀ ಪಾಲಯ್ಯ, ನಿಬಂಧಕರು, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಆನಂದರಾವ್ ಸರ್ಕಲ್, ಬೆಂಗಳೂರು ಅವರು ಕ್ರಮ ಕೈಗೊಳ್ಳುತ್ತಾರೆ" ಎಂದು ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 596

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ಸಂಖ್ಯೆ: ಹೆಚ್‌ಡಿ 27 ಪಿಒಪಿ 2008 (ಭಾ) ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2008.**

**ಸೇರ್ಪಡೆ ಆದೇಶ**

ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣವು ದೇವನಹಳ್ಳಿಯಲ್ಲಿ ಕಾರ್ಯಾರಂಭವಾಗುವ ಕಾರಣ ಬೆಂಗಳೂರು ನಗರ ಪೊಲೀಸ್ ವ್ಯವಸ್ಥೆಯಲ್ಲಿ ಹೊಸ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್ (ಈಶಾನ್ಯ) ವಿಭಾಗ ಸೃಜನೆ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹೊಸ ಪೊಲೀಸ್ ಠಾಣೆ ಮತ್ತು ವೃತ್ತ ಕುರಿತು ಸೃಜನೆ ಮಾಡಿ ಹೊರಡಿಸಿದ ದಿನಾಂಕ 12–3–2008ರ ಆದೇಶ ಸಂಖ್ಯೆ: ಹೆಚ್‌ಡಿ 27 ಪಿಒಪಿ 2008ರ ಆದೇಶದ ಪ್ಯಾರಾ 4ರ ಕೊನೆಯ ಸಾಲುಗಳಲ್ಲಿ ಬರುವ ಮರುಹೊಂದಾಣಿಕೆ ಪದಗಳ ನಂತರ "ಹಾಗೂ ಆದೇಶ ಸಂಖ್ಯೆ: ಹೆಚ್‌ಡಿ 116 ಪಿಒಪಿ 2007, ದಿನಾಂಕ 27–6–2007ರಲ್ಲಿ ಸಾರಾಯಿ ಮತ್ತು ಲಾಟರಿ ನಿಷೇಧ ಜಾರಿಗಾಗಿ ಸೃಜಿಸಲಾಗಿರುವ ಹಾಗೂ ಹೆಚ್ಚುವರಿ ಎನಿಸಿಕೊಂಡ ಹುದ್ದೆಗಳಲ್ಲಿರುವ ಸಿಬ್ಬಂದಿಗಳ ವರ್ಗಾವಣೆ ಮಾಡುವ" ಎಂಬ ಪದಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು. ಮುಂದುವರೆದು, ಪ್ಯಾರಾ 5ರ ಕೊನೆಯ ಸಾಲಿನಲ್ಲಿ ಬರುವ ಸಲಕರಣೆಗಳು ಎಂಬ ಪದಗಳ ನಂತರ "ರೂ. 1,78,90,000/–ಗಳ (ಒಂದು ಕೋಟಿ ಎಪ್ಪತ್ತೆಂಟು ಲಕ್ಷದ ತೊಂಭತ್ತು ಸಾವಿರ ರೂಪಾಯಿಗಳು ಮಾತ್ರ) ವೆಚ್ಚದಲ್ಲಿ" ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 480

**ಇನಾಯತ್ ಉಲ್ಲಾ ಖಾನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

**ವಿಷಯ :** ಶ್ರೀ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು 3ನೇ ಎಂ.ಎಂ. ಟ್ರಾಫಿಕ್ ಕೋರ್ಟ್, ಬೆಂಗಳೂರು ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಉಲ್ಲೇಖ :**
1. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ ಲೋಕ್/ಐಎನ್‌ವಿ(ಜಿ)/ ಕ್ರೈಂ.32/ 2007, ದಿನಾಂಕ 28–1–2008.
2. ತನಿಖಾಧಿಕಾರಿಯ ವರದಿ ದಿನಾಂಕ 21–1–08.
3. ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ :**

ಶ್ರೀ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಎಂ.ಎಂ. ಟ್ರಾಫಿಕ್ ಕೋರ್ಟ್, ಬೆಂಗಳೂರು ಇವರ ವಿರುದ್ಧ ಗುನ್ನೆ ಸಂ. 32/2007ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯು ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ–2, 3) ಮಾನ್ಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ 28–1–08 (ಉಲ್ಲೇಖ–1)ರೊಡನೆ ಕಳುಹಿಸುತ್ತಾ, ಆಪಾಧಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ–1988ರ 19(1)(ಬಿ) ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖಿತ ಪತ್ರ ಸಂಖ್ಯೆ ಲೋಕ್/ ಐಎನ್‌ವಿ(ಜಿ)/ ಕ್ರೈ.32/ 2007, ದಿನಾಂಕ 28–1–2008 ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀಮತಿ ನೀತಾ ಪರಶುರಾಮ್, ನಂ. 528/ಬಿ, 12ನೇ ಕ್ರಾಸ್, ಆರ್.ಎಂ.ವಿ. ಎಕ್ಸ್‌ಟೆನ್ಷನ್, ಬೆಂಗಳೂರು ಇವರ ಪಿರ್ಯಾದಿ ದಿನಾಂಕ 17–9–2007.
2. ಪ್ರಥಮ ವರ್ತಮಾನ ವರದಿ ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ–32/07.
3. ಪ್ರಾಯೋಗಿಕ ಪಂಚನಾಮೆ ದಿನಾಂಕ 17–9–2007.
4. ಟ್ರ್ಯಾಪ್ ಮಹಜರ್ ದಿನಾಂಕ 17–9–2007.
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ PHI/CME/LOK/78:07-08, ದಿನಾಂಕ 13–11–2007.
6. ಕೃತ್ಯ ನಡೆದ ಸ್ಥಳದ ನಕಾಶೆ:
7. ಸಾಕ್ಷಿಗಳ ಹೇಳಿಕೆಗಳು:
   1. ಶ್ರೀಮತಿ ನೀತಾ ಪರಶುರಾಮ್
   2. ಶ್ರೀ ಆರ್. ನಾಗರಾಜು
   3. ಶ್ರೀ ಎನ್. ರಾಜಣ್ಣ
   4. ಶ್ರೀ ಕೆ.ಸಿ. ದಯಾನಂದ್
   5. ಶ್ರೀ ಎಂ.ಹೆಚ್. ಬನ್ನ
   6. ಶ್ರೀ ಬಿ.ಜೆ. ಗಾಳಪ್ಪ
8. ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ: ಸದಾಶಿವನಗರ ಟ್ರಾಫಿಕ್ ಪೊಲೀಸ್ ಠಾಣೆ ಕ್ರೈ.ನಂ. 36/2007, ಸಿ.ಸಿ.ಸಂ. 1892/07, 3ನೇ ಎಂ.ಎಂ. ಟ್ರಾಫಿಕ್ ಕೋರ್ಟ್ ವಿಷಯ: ಸದಾಶಿವನಗರ ಪೊಲೀಸ್ ಠಾಣೆ ವ್ಯಾಪ್ತಿಯ ಅಪಘಾತಕ್ಕೆ ಸಂಬಂಧಿಸಿದಂತೆ,
9. ಆಪಾದಿತರ ಸಮಜಾಯಿಷಿ ಹೇಳಿಕೆಗಳು.
   1. ಶ್ರೀ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು

ತನಿಖಾಧಿಕಾರಿಗಳಾದ ಶ್ರೀ ಎಂ.ಜಿ. ಸುಬ್ಬರಾವ್, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ಇವರು, ಶ್ರೀ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರ ವಿರುದ್ಧ ದಂಡನಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಬೆಂಗಳೂರು ನಗರ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ 31/07ರಲ್ಲಿ ಲಂಚ ನಿರೋಧಕ ಕಾಯ್ದೆ 1988ರ ಕಲಮ್ 7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಪಿರ್ಯಾದಿ ಶ್ರೀಮತಿ ನೀತಾ ಪರಶುರಾಮ್, ನಂ. 528/ಬಿ, 12ನೇ ಕ್ರಾಸ್, ಆರ್.ಎಂ.ವಿ. ಎಕ್ಸ್‌ಟೆನ್ಷನ್, ಬೆಂಗಳೂರು ಇವರ ಪಿರ್ಯಾದಿ ದಿನಾಂಕ 17–9–2007 ಇವರ ಸಿ.ಸಿ.ಸಂ. 1892/07, 3ನೇ ಎಂ.ಎಂ. ಟ್ರಾಫಿಕ್ ಕೋರ್ಟ್ ಸರ್ಕಾರಿ ಕೆಲಸವನ್ನು ಮಾಡಲು ರೂ. 1,000/–ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಪಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸಾರ್ವಜನಿಕ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ 17–9–2007ರಂದು ಬೆಂಗಳೂರು ನಗರದಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಅಕ್ರಮ ಸಂಭಾವನೆಯಾದ 1,000/– ರೂಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಅಪಾಧಿತ ಸಾರ್ವಜನಿಕ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪ್ತಿಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಲ್ಲೂ ಸಹ ಧೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಪಿರ್ಯಾಧಿ ಹಾಗೂ ಆಪಾಧಿತ ಸಾರ್ವಜನಿಕ ಅಧಿಕಾರಿಯ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾವನೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 1,000/–ಗಳನ್ನು ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರಿಂದ ಆಪಾಧಿತರ ಕಛೇರಿಯಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾಧಿತರು ಲಂಚ ನಿರೋಧ ಕಾಯ್ದೆ 1988ರ ಕಲಮ್ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಸರ್ಕಾರಕ್ಕೆ ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನನು ಲಂಚ ನಿರೋಧ ಕಾಯ್ದೆ 1988ರ ಅನ್ವಯ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾಧಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ)ರ ಅಡಿ ಆಪಾಧಿತ ಸಾರ್ವಜನಿಕ ಅಧಿಕಾರಿಯಾದ ಶ್ರೀ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರನ್ನು ಕಲಂ 7 ಮತ್ತು 13(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 446 ಪಿಪಿಇ 2007, ದಿನಾಂಕ: 20ನೇ ಮಾರ್ಚ್ 2008.**

ಲಂಚ ನಿರೋಧ ಕಾಯ್ದೆ 1988ರ ಕಲಂ 19(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀ ಎಸ್.ಎಸ್. ಖಾಜಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಎಂ.ಎಂ. ಟ್ರಾಫಿಕ್ ಕೋರ್ಟ್, ಬೆಂಗಳೂರು ನಗರ ಇವರ ವಿರುದ್ಧ ಕಲಂ 7, 13(1)(ಡಿ) ಸಹವಾಚ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡುತ್ತಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿರ್ವಹಣೆ ನಿಯಮಾವಳಿ 1977ರ ನಿಯಮ 19(1)ರನ್ವಯ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ 20–3–2008ರಂದು ಹೊರಡಿಸಲಾಗಿದೆ.

ಭಾರತ ಸರ್ಕಾರದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 551

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ ಮತ್ತು ಸು ಕಾಫಿಪೋಸ ಮತ್ತು ಅಭಿಯೋಗ)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಸಂಶೋಧನಾ ಸಂಸ್ಥೆ ಸಹಯೋಗದಲ್ಲಿ ಬೆಳಗಾವಿ ಜಿಲ್ಲೆ ಖಾನಾಪುರ ತಾಲ್ಲೂಕಿನ ಹಲಸಿ ಗ್ರಾಮದ ಪ್ರಾಚೀನ ನೆಲೆಯ ಉತ್ಖನನ ಕೈಗೊಳ್ಳಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 46 ಸ್ಮೀಮರ 2007, ದಿನಾಂಕ 27–4–2007.
2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ:ಎಸ್‌ಟಿ:1:55:2007–08, ದಿನಾಂಕ 7–2–2008.

**ಪ್ರಸ್ತಾವನೆ :**

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಸಂಶೋಧನಾ ಸಂಸ್ಥೆಯು ಬೆಳಗಾವಿ ಜಿಲ್ಲೆ ಖಾನಾಪುರ ತಾಲ್ಲೂಕಿನ ಹಲಸಿ ಗ್ರಾಮದ ಪ್ರಾಚೀನ ನೆಲೆಯ ಉತ್ಖನನ ಕಾರ್ಯವನ್ನು ರೂ. 1.50 ಲಕ್ಷಗಳ ವೆಚ್ಚದಲ್ಲಿ ಕೈಗೊಳ್ಳಲು ಉದ್ದೇಶಿಸಿದ್ದು ಇದರಲ್ಲಿ ರೂ. 50,000/–ಗಳನ್ನು ವಿಶ್ವವಿದ್ಯಾನಿಲಯವು ಭರಿಸಲಿದ್ದು ಉಳಿಕೆ ಮೊತ್ತ ರೂ. 1,00,000/–ಗಳನ್ನು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯಿಂದ ಭರಿಸಬೇಕಾಗಿ ಕೋರಿರುತ್ತಾರೆ. ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ 2007–08ನೇ ಸಾಲಿನ ಮುಂದುವರಿದ ಯೋಜನಾ ಕಾರ್ಯಕ್ರಮಗಳಿಗೆ ಅನುಮೋದನೆ ನೀಡಲ್ಪಟ್ಟ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಯೋಜನೆಗೆ ರೂ. 1,00,000/–ಗಳನ್ನು ಕಾದಿರಿಸಲಾಗಿದ್ದು ಇದಕ್ಕೆ ಸರ್ಕಾರದಿಂದ ಮಂಜೂರಾತಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 37 ಕೆಎಂಯು 2008, ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2008.**

ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಸಂಶೋಧನಾ ಸಂಸ್ಥೆಯ ಸಹಯೋಗದೊಂದಿಗೆ ಬೆಳಗಾವಿ ಜಿಲ್ಲೆ ಖಾನಾಪುರ ತಾಲ್ಲೂಕಿನ ಹಲಸಿ ಗ್ರಾಮದ ಪ್ರಾಚೀನ ನೆಲೆಯ ಉತ್ಖನನ ಕಾರ್ಯವನ್ನು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಪರವಾಗಿ ಕೈಗೊಳ್ಳಲು ರಿಜಿಸ್ಟ್ರಾರ್, ಕರ್ನಾಟಕ ವಿಶ್ವವಿದ್ಯಾನಿಲಯ, ಪಾವಟಿನಗರ, ಧಾರವಾಡ ಅವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಪೇಯೀಸ್ ರಸೀತ್ ಮೂಲಕ ರೂ. 1,00,000/–ಗಳನ್ನು (ಒಂದು ಲಕ್ಷ ರೂಪಾಯಿ ಮಾತ್ರ) ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

1. ಅನುದಾನವನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕೆ ಖರ್ಚು ಮಾಡತಕ್ಕದ್ದು.
2. ಸದರಿ ಹಣ ಬಳಕೆಯಾದ ಬಗ್ಗೆ ಹಣಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
3. ಕಾರ್ಯಾಗಾರವನ್ನು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಅಧಿಕಾರಿಗಳ ಮೇಲುಸ್ತುವಾರಿಯಲ್ಲಿ ನಡೆಸತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ)–059ರಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರೊಡನೆ ಸಮಾಲೋಚಿಸಿ ಇಲಾಖೆಗೆ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 468

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## COMMERCE AND INDUSTRIES SECRETARIAT

**Sub :** Transfer of Mining lease No. 2319 held by Shri B.R. Shivakumar Singh in favour of M/s. Shree Rameshwara Manganese and Iron Ore Pvt. Ltd.

**Read :** Letter No. DMG/4. TRN.2004:3807 dated 24-3-2005 of the Dirctor of Mines and Geology, Bangalore.

**Preamble:**

The Director of Mines and Geology, Bangalore in his letter read above has stated that Shri B.R. Shivakumar Singh is holding Mining Lease No. 2319 for Iron ore, Manganese ore, Limestone and Dolomite, over an area of 114-00 acres (One hundred fourteen acres only) in Yarekatte and Doddarampura Villages of Chikkanayakanahalli Taluk, Tumkur District, for a period of 20 years w.e.f. 5-6-1991. Shri B.R. Shivakumar Singh has requested to transfer the said Mining lease held by him in favour of M/s. Shree Rameshwara Manganese and Iron Ore Pvt. Ltd.

Directors of M/s. Shree Rameshwara Manganese and Iron Ore Pvt. Ltd., has also agreed to take over the Mining lease on trasfer as per Rule 37 of Mineral Concession Rules, 1960 subject to terms and conditions of mining lease. The Director of Mines and Geology has recommended to the Government for

transfer of Mining Lease No. 2319 held by Shri B.R. Shivakumar Singh in favour of M/s Shree Rameshwara Manganese and Iron Ore Pvt. Ltd., as per Rule 37 of Mineral Concession Rules, 1960.

The proposal has been examined in detail and thus the following order:

**Government Order No. CI 91 MMM 2005, Bangalore, Dated 18th March 2008**

In the cirucumstances explained in the preamble, Government are pleased to accord sanction for transfer of Mining Lease No. 2319 held by Shri B.R. Shivakumar Singh for Iron ore, Manganese ore, Limestone and Dolomite, over and area of 114-00 acres (One hundred fourteen acres only) in Yarekatte and Doddarampura Villages of Chikkanayakanahalli Taluk, Tumkur District, for a period of 20 years w.e.f. 5-6-1991 in favour of M/s. Shree Rameshwara Manganese and Iron ore Pvt. Ltd., subject to the condition that the transfere viz., M/s. Sree Rameshwara Manganese and Iron ore Pvt. Ltd., shall accept all the conditions and liabilities which the transferor was having in respect of the said mining lease.

By order and in the name of the President of India,

PR. 471

**L.S. VASAN**

Under Secretary to Government (Mines)(I/c),

Commerce & Industries Department.

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಕನ್ನಡ ಭವನ ಕದಂಬ/ಚಾಲುಕ್ಯ ವಿಭಾಗಗಳ ಹಾಗೂ ರವೀಂದ್ರ ಕಲಾಕ್ಷೇತ್ರ ಹೊಂದಿಕೊಂಡಂತೆ ಭದ್ರತಾ ರಕ್ಷಕರ ಸೇವೆಯನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸ: ಕಸಂವಾಪ್ರ 46 ಸ್ವೀಮರ 2007, ದಿ: 27–4–07.
2. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರ ಪತ್ರ ಸಂ: ಕಸನಿ/50 ಕಭಾಗುಸೇ/ 2007–08, ದಿ: 4–12–07.

**ಪ್ರಸ್ತಾವನೆ :**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ 2007–08ನೇ ಸಾಲಿನ ಯೋಜನೆ–ಯೋಜನೇತರ ಕಾರ್ಯಕ್ರಮಗಳಿಗೆ ಅನುಮೋದನೆ ನೀಡಿ ಹೊರಡಿಸಲ್ಪಟ್ಟ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕನ್ನಡ ಭವನ ಹಾಗೂ ರವೀಂದ್ರ ಕಲಾಕ್ಷೇತ್ರದ ಸ್ವಚ್ಛತೆ, ನಿರ್ವಹಣೆ ಭದ್ರತೆ ನವೀಕರಣಕ್ಕಾಗಿ ಯೋಜನೆಯಲ್ಲಿರುವ 80 ಲಕ್ಷಗಳನ್ನು ಯೋಜನೇತರದಲ್ಲಿ ರೂ. 16.55 ಲಕ್ಷಗಳನ್ನು ನಿಗಧಿಪಡಿಸಿದೆ. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರು ಮೇಲೆ ಓದಲಾದ ದಿ: 4–12–07ರ ಪತ್ರದಲ್ಲಿ ಕನ್ನಡ ಭವನದ ಕದಂಬ/ಚಾಲುಕ್ಯ ವಿಭಾಗಗಳ ಹಾಗೂ ರವೀಂದ್ರ ಕಲಾಕ್ಷೇತ್ರ ಹೊಂದಿಕೊಂಡಂತೆ ಭದ್ರತಾ ರಕ್ಷಕರ ಸೇವೆಯನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳುವ ಸಲುವಾಗಿ ಟೆಂಡರ್ ಕರೆಯಲಾಗಿದ್ದು, ಸದರಿ ಟೆಂಡರ್‌ನಲ್ಲಿ ನಮೂದಿಸಿರುವ ದರಗಳನ್ನು ಪರಿಶೀಲಿಸಲಾಗಿ ಮೆಸರ್ಸ್ ಶಕ್ತಿ ಸೆಕ್ಯೂರಿಟಿ ಮತ್ತು ಆಲೈಡ್ ಸರ್ವೀಸಸ್, ನಂ. 6, 2ನೇ ಮಹಡಿ, ಬೀರೇಶ್ವರ ದೇವಸ್ಥಾನದ ಎದುರು, ಬಾಪೂಜಿನಗರ, ಮೈಸೂರು ರಸ್ತೆ, ಬೆಂಗಳೂರುರವರ ದರಗಳನ್ನು ಒಪ್ಪಿದ್ದು, ಅವರಿಗೆ ದಿ: 20–9–2007 ರಿಂದ 19–9–2008ರವರೆಗೆ ಎರಡು ಸೆಕ್ಯೂರಿಟಿ ಸೂಪರ್ ವೈಸರ್, ಎರಡು ಸೆಕ್ಯೂರಿಟಿ ಹೆಡ್ ಗಾರ್ಡ್, ಹದಿನೆಂಟು ಸೆಕ್ಯೂರಿಟಿ ಗಾರ್ಡ್ ಸಿಬ್ಬಂದಿ ಹುದ್ದೆಗಳಿಗಾಗಿ ಜನರನ್ನು ನಿಯೋಜಿಸಲು ಅನುಮತಿ ನೀಡಲಾಗಿದ್ದು, ಇದಕ್ಕಾಗಿ ತಗಲುವ ರೂ. 9,98,910.96ಗಳನ್ನು ವೆಚ್ಚ ಮಾಡಲು ಅನುಮೋದನೆ ನೀಡುವಂತೆ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 227 ಕಸನಿ 2007, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2008.**

ಸರ್ಕಾರವು ನೊಂದಾಯಿತ ಏಜೆನ್ಸಿ ಸಂಸ್ಥೆಗಳಿಂದ ಹೊರಗುತ್ತಿಗೆ ಆಧಾರದ ಮೇಲೆ ಈ ಕೆಳಕಂಡ ಹುದ್ದೆಗಳಿಗೆ ದಿ: 20–9–2007 ರಿಂದ 19–9–2007ರವರೆಗೆ ಒಂದು ವರ್ಷಕ್ಕೆ ಸಿಬ್ಬಂದಿಯನ್ನು ನೇಮಕ ಮಾಡಿಕೊಂಡ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಕ್ರಮವನ್ನು ಈ ಮೂಲಕ ಅನುಸಮರ್ಥಿಸುತ್ತದೆ.

1. ಸೆಕ್ಯೂರಿಟಿ ಸೂಪರ್ ವೈಸರ್ –2
2. ಸೆಕ್ಯೂರಿಟಿ ಹೆಡ್ ಗಾರ್ಡ್ –2
3. ಸೆಕ್ಯೂರಿಟಿ ಗಾರ್ಡ್ –18

ಈ ಸಂಬಂಧ ತಗಲುವ ವೆಚ್ಚ ರೂ. 9,98,911/–ಗಳನ್ನು (ರೂಪಾಯಿ ಒಂಭತ್ತು ಲಕ್ಷ ತೊಂಭತ್ತೆಂಟು ಸಾವಿರದ ಒಂಭೈನೂರ ಹನ್ನೊಂದು ಮಾತ್ರ) 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–800–0–01–200 (ಯೋಜನೇತರ) ಹಾಗೂ ಲೆಕ್ಕಶೀರ್ಷಿಕೆ 4202–04–800–1–01–139 ಜಿಲ್ಲಾ ರಂಗಮಂದಿರ ನಿರ್ಮಾಣ ಹಾಗೂ ಕನ್ನಡ ಭವನ ನಿರ್ಮಾಣ, ನಿರ್ವಹಣೆ (ಯೋಜನೆ) ಕ್ರಿ.ಯೋ.ಸಂ. 26(4)ರ ಅಡಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ, ಪ್ರವಾಸೋದ್ಯಮ ಇಲಾಖೆ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 469

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ :** ಹರಪನಹಳ್ಳಿ ಸಿವಿಲ್ ಜಡ್ಜ್ (ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಮೂಲಸೌಲಭ್ಯ ಒದಗಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶದ ಸಂಖ್ಯೆ: ಲಾ 47 ಎಲ್‌ಸಿಇ 2004, ದಿನಾಂಕ 23–6–2005.
2. ಸರ್ಕಾರಿ ಆದೇಶದ ಸಂಖ್ಯೆ: ಲಾ 246 ಎಲ್‌ಸಿಇ 2007, ದಿನಾಂಕ 1–10–2007.
3. ಪತ್ರ ಸಂಖ್ಯೆ: ಜಿಓಬಿ. 11–59/90, ದಿನಾಂಕ 17–10–2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ದಾವಣಗೆರೆಯಲ್ಲಿ 3ನೇ ಹೆಚ್ಚುವರಿ ಸಿವಿಲ್ ಜಡ್ಜ್ (ಹಿ.ವಿ.) ನ್ಯಾಯಾಲಯವನ್ನು ಸ್ಥಾಪಿಸಲು ಮಂಜೂರು ಮಾಡಲಾಗಿರುತ್ತದೆ. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹರಪನಹಳ್ಳಿ ಸಿವಿಲ್ ಜಡ್ಜ್ (ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ ಪ್ರಾರಂಭಿಸಲು ಮಂಜುರಾತಿ ನೀಡಲಾಗಿದೆ. ಮೇಲೆ ಕ್ರಮ ಸಂಖ್ಯೆ: (3)ರ ಓದಲಾದ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್‌ರವರು ಮೇಲೆ ಕ್ರಮ ಸಂಖ್ಯೆ: (2)ರ ಓದಲಾದ ಸರ್ಕಾರಿ ಆದೇಶದಲ್ಲಿ ನಮೂದಿಸಿರುವ ಲೆಕ್ಕಶೀರ್ಷಿಕೆ "2014–00–105–0–10 (ಯೋಜನೆ)" ಬದಲಾಗಿ ಲೆಕ್ಕಶೀರ್ಷಿಕೆ "2014–105–01–125 ಆಧುನೀಕರಣ" ಎಂದು ನಮೂದಿಸುವಂತೆ ಕೋರಿದ್ದಾರೆ. ಹರಪನಹಳ್ಳಿ ನ್ಯಾಯಾಲಯಕ್ಕೆ ಅವಶ್ಯಕವಾಗಿ ಅಗತ್ಯವಿರುವ ಪೀಠೋಪಕರಣಗಳು, ಬೆರಳಚ್ಚು ಯಂತ್ರ, ದೂರವಾಣಿ ಜೆರಾಕ್ಸ್ ಯಂತ್ರ, ಗಣಕಯಂತ್ರ, ಲೇಖನ ಸಾಮಾಗ್ರಿಗಳು, ನಮೂನೆ ರಿಜಿಸ್ಟ್ರಾರ್‌ಗಳ ಮೊಹರ್‌ಗಳು ಹಾಗೂ ಕರ್ನಾಟಕ ರಾಜ್ಯಪತ್ರವನ್ನು ಸರಬರಾಜು ಮಾಡಲು ನಿರ್ದೇಶಕ, ಕರ್ನಾಟಕ ಮುದ್ರಣ ಲೇಖನಾ ಸಾಮಗ್ರಿಗಳು ಹಾಗೂ ಪ್ರಕಟಣ ಇಲಾಖೆಯವರಿಗೆ ಆದೇಶಿಸುವಂತೆ ಕೋರಿದ್ದಾರೆ.

ಬೇಲಿಫ್ಸ್ ಮತ್ತು ಪ್ರೋಸಸ್ ಸರ್ವರ್ ಹುದ್ದೆಗಳನ್ನು ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ಹರಪನಹಳ್ಳಿಯಿಂದ ಹೊಸದಾಗಿ ಸೃಜಿಸಲಾದ ಸಿವಿಲ್ ಜಡ್ಜ್ (ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಗಳಿಗೆ ಪ್ರೋಸಸ್ ಸರ್ವರ್ ಮತ್ತು ಬೇಲಿಫ್ಸ್ ಹುದ್ದೆಗಳನ್ನು ವರ್ಗಾಯಿಸಿ ನೇಮಕ ಮಾಡುವಂತೆ ಪ್ರಸ್ತಾಪಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 246 ಎಲ್‌ಸಿಇ 2007, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹರಪನಹಳ್ಳಿ ಸಿವಿಲ್ ಜಡ್ಜ್ (ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಅಗತ್ಯವಿರುವ ಪೀಠೋಪಕರಣಗಳು, ಬೆರಳಚ್ಚು ಯಂತ್ರ ಜೆರಾಕ್ಸ್ ಯಂತ್ರ, ಗಣಕಯಂತ್ರ, ಫ್ಯಾಕ್ಸ್ ಯಂತ್ರ ಇತ್ಯಾದಿಗಳನ್ನು ಸ್ಟಾಂಡರ್ಡ್ ಸ್ಕೇಲಿಗೆ ಅನುಗುಣವಾಗಿ ನಿಯಮಾನುಸಾರ ಖರೀದಿಸಲು ಮಂಜೂರಾತಿ ನೀಡಲಾಗಿದೆ.

ಸದರಿ ನ್ಯಾಯಾಲಯಕ್ಕೆ ಅಗತ್ಯವಾಗಿ ಬೇಕಾಗಿರುವ ಲೇಖನ ಸಾಮಗ್ರಿಗಳು ನಮೂನೆಗಳು, ರಿಜಿಸ್ಟರ್‌ಗಳ ಮೊಹರುಗಳು, ಕರ್ನಾಟಕ ಸರ್ಕಾರಿ ಪತ್ರ (ಗೆಜೆಟ್) ವಗೈರೆಯನ್ನು ಸರ್ಕಾರಿ ಮುದ್ರಣಾಲಯದಿಂದ ಪಡೆದುಕೊಳ್ಳತಕ್ಕದ್ದು.

ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರದ ಆದೇಶದಲ್ಲಿ ಹೊಸದಾಗಿ ಸೃಜಿಸಲಾದ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ಹರಪನಹಳ್ಳಿ ನ್ಯಾಯಾಲಯಕ್ಕೆ ಪ್ರೋಸಸ್ ಸಿಬ್ಬಂದಿಯನ್ನು ಮಂಜೂರು ಮಾಡಿರುವುದರ ಜೊತೆಗೆ ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ಹರಪನಹಳ್ಳಿ ನ್ಯಾಯಾಲಯಕ್ಕೆ ಸಿಬ್ಬಂದಿಯು ಹೊಂದಿಕೊಂಡಿರುವ ಲೆಕ್ಕಕ್ಕೆ ಬೇಲಿಫ್ಸ್ ಮತ್ತು ಪ್ರೋಸಸ್ ಸರ್ವರ್ ಹುದ್ದೆಗಳನ್ನು ಹರಪನಹಳ್ಳಿಯ ನೂತನ ಸಿವಿಲ್ ಜಡ್ಜ್ (ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಸ್ಥಳಾಂತರಿಸಲು ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು "ಲೆಕ್ಕಶೀರ್ಷಿಕೆ ಸಂಖ್ಯೆ 2014–ನ್ಯಾಯಾಂಗ ಆಡಳಿತ–105–ಸಿವಿಲ್ ಮತ್ತು ಸತ್ರ ನ್ಯಾಯಾಲಯ–01 ಸಿಬ್ಬಂದಿ ವೆಚ್ಚಗಳ–125 ಆಧುನೀಕರಣ (ಯೋಜನೇತರ)" ಅಡಿಯಲ್ಲಿ ಭರಿಸತಕ್ಕದ್ದು.

ಭಾರತದ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 194

**ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಕಚೇರಿಗಳಿಗೆ ಕಂಪ್ಯೂಟರ್ ಸಿಸ್ಟಂಗಳನ್ನು ಖರೀದಿಸಲು ಇಲಾಖಾ ತಾಂತ್ರಿಕ ಸಲಹಾ ಸಮಿತಿಯ (TAP) ಪುನರ್ ರಚನೆ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಪಿಡಿ 121 ಸಿಎಸ್ಎಸ್ 97 ದಿನಾಂಕ 8–1–1998.
2. ಕರ್ನಾಟಕ ಸರ್ಕಾರಿ ಗಣಕ ಕೇಂದ್ರದ ಪತ್ರ ಸಂಖ್ಯೆ: ಜಿಸಿ/ ಟ್ಯಾಪ್/ 385/ 97–98, ದಿನಾಂಕ 18–6–1998.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 35 ಇಆಇ 2004, ದಿನಾಂಕ 21–5–2005.
4. ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ವಿಪ(ಆ)/ಉವಿಪ/ಕೈಪಿಡಿ/17164/07–08, ದಿನಾಂಕ 19–9–2007.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿರುವ ಸರ್ಕಾರಿ ಇಲಾಖೆಗಳ ವಿಕೇಂದ್ರೀಕರಣಕ್ಕಾಗಿ ಕಂಪ್ಯೂಟರ್‌ಗಳನ್ನು ಖರೀದಿಸಲು ಹಾಗೂ ಹಾರ್ಡ್‌ವೇರ್, ಸಾಫ್ಟ್‌ವೇರ್ ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯುವ ಸಲುವಾಗಿ ಇಲಾಖಾ ಕಾರ್ಯದರ್ಶಿಯವರ ಅಧ್ಯಕ್ಷತೆಯನ್ನೊಳಗೊಂಡ ಇಲಾಖಾ ತಾಂತ್ರಿಕ ಸಲಹಾ ಸಮಿತಿಯನ್ನು ರಚಿಸಲು ತಾಂತ್ರಿಕ ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಿ ಇಲಾಖೆಗಳಿಗೆ ಹಾರ್ಡ್‌ವೇರ್, ಸಾಫ್ಟ್‌ವೇರ್ ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯುವ ಸಲುವಾಗಿ ಮತ್ತು ಗಣಕೀಕರಣದ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಲು ವಿವಿಧ ಇಲಾಖಾ ತಾಂತ್ರಿಕ ಸಲಹಾ ಸಮಿತಿಗಳಿಗೆ ತಾಂತ್ರಿಕ ಸದಸ್ಯರಾಗಿ ಕಾರ್ಯನಿರ್ವಹಿಸಲು ವಿವಿಧ ಸಂಸ್ಥೆಗಳ ತಜ್ಞರನ್ನು ನಾಮ ನಿರ್ದೇಶನ ಮಾಡಲಾಗಿತ್ತು.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರಿ ಇಲಾಖೆಗಳಿಗೆ ಹಾರ್ಡ್‌ವೇರ್, ಸಾಫ್ಟ್‌ವೇರ್ ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯುವ ಸಲುವಾಗಿ ಮತ್ತು ಗಣಕೀಕರಣದ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಲು ವಿವಿಧ ಇಲಾಖಾ ತಾಂತ್ರಿಕ ಸಲಹಾ ಸಮಿತಿಗಳಿಗೆ ತಾಂತ್ರಿಕ ಸದಸ್ಯರಾಗಿ ಕಾರ್ಯ ನಿರ್ವಹಿಸಲು ತಾಂತ್ರಿಕ ಸದಸ್ಯರನ್ನು ನಾಮ ನಿರ್ದೇಶನ ಮಾಡಿ, ಆಯಾ ಇಲಾಖೆಗಳು ಈ ತಾಂತ್ರಿಕ ಸದಸ್ಯರೊಂದಿಗೆ ತಾಂತ್ರಿಕ ಸಲಹಾ ಸಮಿತಿಯನ್ನು ಪುನರ್ ರಚಿಸಿಕೊಳ್ಳಬಹುದೆಂದು ಆದೇಶಿಸಲಾಗಿತ್ತು.

ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಜಿಲ್ಲಾವಾರು ಕಚೇರಿಗಳಿಗೆ ಕಂಪ್ಯೂಟರ್ ಅಗತ್ಯತೆ ಇರುವ ಬಗ್ಗೆ ಸವಿಸ್ತಾರವಾಗಿ ವಿವರಿಸುತ್ತಾ, ವಿದ್ಯುತ್ ಸ್ಥಾವರಗಳಿಗೆ ನೀಡುವ ಡ್ರಾಯಿಂಗ್ ಹಾಗೂ ಗ್ರಾಹಕರು ಸಲ್ಲಿಸಬೇಕಾದ ಅರ್ಜಿ ನಮೂನೆಗಳನ್ನು ವೆಬ್‌ಸೈಟ್‌ನಲ್ಲಿ ಅಳವಡಿಸಲು, ಮಾಹಿತಿ ಹಕ್ಕು ಕಾಯಿದೆ ಮತ್ತು ನಿಯಮಗಳ ಅನುಸಾರ ಮಾಹಿತಿ ಕೋರಲಾಗುತ್ತಿದ್ದು, ಅವುಗಳ ಶೀಘ್ರ ತಯಾರಿಕೆಗೆ, ಸರ್ಕಾರಿ ನೌಕರರ ವೇತನವನ್ನು ಹಾಗೂ ಸೇವಾ ರಿಜಿಸ್ಟರನ್ನು ಎಲೆಕ್ಟ್ರಾನಿಕ್ ಆಗಿ ಪರಿವರ್ತಿಸಿ, ನಿರ್ವಹಿಸಲು Human Resource Management System ಅಡಿ ಪ್ರತಿ ತಿಂಗಳ ವೇತನವನ್ನು ಪಡೆಯುವಾಗ ಸಂಬಂಧಪಟ್ಟ ಇ–ಆಡಳಿತ ವೆಬ್‌ಸೈಟ್‌ಗೆ ಸಂಬಂಧಪಟ್ಟ ಜಿಲ್ಲಾ ಕಚೇರಿಗಳು ವೇತನ ಬಿಲ್ಲಿನ ವಿವರಗಳನ್ನು ಅಪ್–ಲೋಡ್ ಮಾಡಲು ಜಿಲ್ಲಾ ಕಚೇರಿಗಳಲ್ಲಿ ಕಂಪ್ಯೂಟರ್ ಸಿಸ್ಟಂನ ಅಗತ್ಯ ಇರುವುದರಿಂದ, ಅವಶ್ಯಕ ಸಂಖ್ಯೆಯ ಗಣಕಯಂತ್ರಗಳನ್ನು ಒದಗಿಸುವಂತೆ ಕೋರಿರುತ್ತಾರೆ.

ಮುಖ್ಯ ವಿದ್ಯುತ್ ಪರಿವೀಕ್ಷಕರ ಪ್ರಸ್ತಾವನೆ ಪರಿಶೀಲಿಸಲು ಇಲಾಖಾ ತಾಂತ್ರಿಕ ಸಲಹಾ ಸಮಿತಿಯ ರಚನೆ ಕುರಿತು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 131 ಇಬಿಎಸ್ 2007 ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಕಚೇರಿಗಳಿಗೆ ಹಾರ್ಡ್‌ವೇರ್, ಸಾಫ್ಟ್‌ವೇರ್ ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯಲು/ಖರೀದಿಸಲು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಇಲಾಖಾ ತಾಂತ್ರಿಕ ಸಲಹಾ ಸಮಿತಿಯ (TAP) ಯನ್ನು ಪುನರ್ ರಚಿಸಲಾಗಿದೆ.

1. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ — ಅಧ್ಯಕ್ಷರು
2. ಮುಖ್ಯ ವಿದ್ಯುತ್ ಪರಿವೀಕ್ಷಕರು — ಸದಸ್ಯರು
3. ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ — ಸದಸ್ಯರು
4. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆಯವ್ಯಯ–2) — ಸದಸ್ಯರು
5. ಶ್ರೀ ಎಂ.ಎಂ. ಬಾಬು ನಾರಾಯಣ, ಇಂಜಿನಿಯರಿಂಗ್ ಆಫೀಸರ್ ಗ್ರೇಡ್–4, ಸಿಪಿಆರ್ಐ — ಸದಸ್ಯರು

6 ಪ್ರೊ: ರಾಜೇಂದ್ರ ಕೆ. ಬಂಡಿ,
ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸದಸ್ಯರು
7. ನಿರ್ದೇಶಕರು, ಯೋಜನಾ ಇಲಾಖೆ ಸದಸ್ಯರು
8. ನಿರ್ದೇಶಕರು, ನ್ಯಾಷನಲ್ ಇನ್‌ಫಾರ್ಮೆಟಿಕ್ ಸೆಂಟರ್ ಸದಸ್ಯರು
9. ನಿರ್ದೇಶಕರ ಪ್ರತಿನಿಧಿ, ಇ–ಆಡಳಿತ ಸದಸ್ಯರು

ಮೇಲಿನ ತಾಂತ್ರಿಕ ಸಲಹಾ ಸಮಿತಿಯು, ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಕಚೇರಿಗಳಿಗೆ ಹಾರ್ಡ್‌ವೇರ್, ಸಾಫ್ಟ್‌ವೇರ್ ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯಲು/ ಖರೀದಿಸಲು ದಿನಾಂಕ 18–6–1998ರ ಕರ್ನಾಟಕ ಸರ್ಕಾರ ಗಣಕ ಕೇಂದ್ರದ ಪತ್ರ ಸಂಖ್ಯೆ: ಜಿಸಿಸಿ/ಟ್ಯಾಪ್/385/97–98ರಲ್ಲಿನ ಮಾರ್ಗಸೂಚಿಯನ್ನು ಅನುಸರಿಸುವುದು.

ಈ ಆದೇಶವನ್ನು ಯೋಜನಾ ಇಲಾಖೆಯ ಆದೇಶ ಸಂಖ್ಯೆ: ಪಿಡಿ 121 ಸಿಎಸ್‌ಎಸ್ 97, ದಿನಾಂಕ 8–1–1998ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 473

**ಸುಜಾತಮ್ಮ**
ಪೀಠಾಧಿಕಾರಿ
ಇಂಧನ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಲೋಕಾಯುಕ್ತ ಸಂಸ್ತೆಯ ಡಿ.ಐ.ಜಿ. (ಪೊಲೀಸ್ ವಿಭಾಗ) ಮತ್ತು ಮುಖ್ಯ ಇಂಜಿನಿಯರ್ (ತಾಂತ್ರಿಕ ವಿಭಾಗ) ಇವರ ಉಪಯೋಗಕ್ಕಾಗಿ ಎರಡು ಹೊಸ ವಾಹನಗಳನ್ನು ಖರೀದಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಸೇಲೋಯು 2008 ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2008.**

**ಓದಲಾಗಿದೆ:** ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ 11–2–2008ರ ಪತ್ರ ಸಂಖ್ಯೆ: ಲೋಕ್/ಹೊಸ.ವಾ.ಖರೀದಿ/07–08.

**ಪ್ರಸ್ತಾವನೆ :**

ಕರ್ನಾಟಕ ಲೋಕಾಯುಕ್ತ ಸಂಸ್ಥೆಯ ಡಿ.ಐ.ಜಿ. (ಪೊಲೀಸ್ ವಿಭಾಗ) ಮತ್ತು ಮುಖ್ಯ ಇಂಜಿನಿಯರ್ (ತಾಂತ್ರಿಕ ವಿಭಾಗ) ಇವರುಗಳು ತನಿಖಾ ಕಾರ್ಯಗಳಿಗೆ ರಾಜ್ಯಾದ್ಯಂತ ಕೈಗೊಳ್ಳುವ ಪ್ರವಾಸಕ್ಕೆ ಹೊಂದಿಕೊಳ್ಳುವಂತಹ ಎರಡು ಟಾಟಾ ಇಂಡಿಗೋ GLX (Petrol) EURO III ವಾಹನಗಳನ್ನು, ಡಿ.ಜಿ.ಎಸ್. ಮತ್ತು ಡಿ ದರದಲ್ಲಿ ಖರೀದಿಸಲು (ಪ್ರತಿ ವಾಹನದ ದರ ರೂ. 4,52,090/–) ಹಾಗೂ ಇದಕ್ಕೆ ವೆಚ್ಚವಾಗುವ ಒಟ್ಟು ರೂ. 9,04,180/–ನ್ನು ಲೆಕ್ಕಶೀರ್ಷಿಕೆ "2070–104–03"ಯ ಉಪಲೆಕ್ಕಶೀರ್ಷಿಕೆ "ಸಾರಿಗೆ ವೆಚ್ಚ–195"ರಲ್ಲಿ ಲಭ್ಯವಿರುವ ಅನುದಾನದಲ್ಲಿ ಟಾಟಾ ಮೋಟಾರ್ಸ್ ಲಿಮಿಟೆಡ್, ವಿಠಲಮಲ್ಯ ರಸ್ತೆ, ಬೆಂಗಳೂರು ಇವರಿಂದ ಖರೀದಿಸಲು ಮೇಲೆ ಓದಲಾದ ದಿನಾಂಕ 11–2–2008ರ ಪತ್ರದಲ್ಲಿ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಇವರು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 2007–08ನೇ ಸಾಲಿನಲ್ಲಿ ಕರ್ನಾಟಕ ಲೋಕಾಯುಕ್ತಕ್ಕೆ ಒದಗಿಸಿರುವ ಅನುದಾನದಲ್ಲಿ ಲೋಕಾಯುಕ್ತ ಸಂಸ್ಥೆಯ ಡಿ.ಐ.ಜಿ. (ಪೊಲೀಸ್ ವಿಭಾಗ) ಹಾಗೂ ಮುಖ್ಯ ಇಂಜಿನಿಯರ್ (ತಾಂತ್ರಿಕ ವಿಭಾಗ) ಇವರ ಉಪಯೋಗಕ್ಕಾಗಿ ಡಿ.ಜಿ.ಎಸ್. ಮತ್ತು ಡಿ ದರದಲ್ಲಿ ಎರಡು ಟಾಟಾ ಇಂಡಿಗೋ ಜಿಎಲ್‌ಕ್ಸ್ (ಪೆಟ್ರೋಲ್– Euro III) ಕಾರುಗಳನ್ನು (ಪ್ರತಿ ಕಾರಿಗೆ ರೂ. 4,52,090/–ಗಳಂತೆ) ಈ ಒಟ್ಟು ಮೊತ್ತ ರೂ. 9,04,180/– (ಒಂಬತ್ತು ಲಕ್ಷ ನಾಲ್ಕು ಸಾವಿರದ ನೂರಾ ಎಂಬತ್ತು ರೂಪಾಯಿ) ವೆಚ್ಚದಲ್ಲಿ ಖರೀದಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2070–00–104–0–03–195–ಸಾರಿಗೆ ವೆಚ್ಚ"ದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 479 ವೆಚ್ಚ–5/2008, ದಿನಾಂಕ 15–3–2008ರ ಸಹಮತಿಯೊಂದಿಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 474

**ಪಿ. ಮಾರ್ಕಂಡೇಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–2)

**ತೋಟಗಾರಿಕೆ ಸಚಿವಾಲಯ**

**ವಿಷಯ :** 2007–08ನೇ ಸಾಲಿನಲ್ಲಿ "ಅಂತರಾಷ್ಟ್ರೀಯ ಕೃಷಿ ವ್ಯಾಪಾರ ಮೇಳ" (ಲೆಕ್ಕಶೀರ್ಷಿಕೆ 2401–00–800–2–35) –ಹೊಸ ಯೋಜನೆಗೆ ಅನುದಾನ ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕೃತೋಇ:80:ತೋಯೋಕಾ:2007, ದಿನಾಂಕ 20–8–2007.
2. ಅಂತರ ರಾಷ್ಟ್ರೀಯ ಕೃಷಿ ವ್ಯಾಪಾರ ಮೇಳದ ನೊಂದಣಿ ಪತ್ರ ಸಂಖ್ಯೆ: BG-SO-26-2007-08, Dated 17-10-2007.
3. ಸರ್ಕಾರದ ಕಾರ್ಯದರ್ಶಿಗಳು, ತೋಟಗಾರಿಕೆ ರವರ ಅಧ್ಯಕ್ಷತೆಯಲ್ಲಿ ದಿನಾಂಕ 17–12–2007 ರಂದು ನಡೆದ ಅಂತರ ರಾಷ್ಟ್ರೀಯ ಕೃಷಿ ವ್ಯಾಪಾರ ಮೇಳದ ಕಾರ್ಯಕಾರಿ ಪ್ರಾಧಿಕಾರದ ಮೊದಲನೇ ಸಭೆಯ ನಡವಳಿಗಳು.
4. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ತೋಇ:ಜಂನಿ(ಜೀವತಾ): ತಾಸ:6:2007–08, ದಿನಾಂಕ 4–2–2008.

**ಪ್ರಸ್ತಾವನೆ :**

1) 2007–08ನೇ ಸಾಲಿನಲ್ಲಿ "ಅಂತರ ರಾಷ್ಟ್ರೀಯ ಕೃಷಿ ವ್ಯಾಪಾರ ಮೇಳ" ಎಂಬ ಹೊಸ ಯೋಜನೆಯನ್ನು ಲೆಕ್ಕಶೀರ್ಷಿಕೆ 2401–00–800–2–35 (ಯೋಜನೆ) ರಡಿ ಲಭ್ಯವಿರುವ ರೂ. 500 ಲಕ್ಷಗಳನ್ನು ವಿನಿಯೋಗಿಸಿ ಅನುಷ್ಠಾನಗೊಳಿಸಲು "Green Life International, Poojenahally" ಎಂಬ ಸಂಸ್ಥೆಯನ್ನು ಸ್ಥಾಪಿಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದನ್ವಯ ಅನುಮೋದನೆಯನ್ನು ನೀಡಲಾಗಿತ್ತು.

2) ಈ ಅನ್ವಯ THE GREEN LIFE INTERNATIONAL, POOJENAHALLY, BANGALORE ಸಂಸ್ಥೆಯನ್ನು ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960ರಡಿ ಮೇಲೆ ಓದಲಾದ (2)ರ ಪತ್ರದಂತೆ ನೊಂದಾಯಿಸಲಾಗಿದೆ.

3) ಮೇಲೆ ಓದಲಾದ (3)ರ ನಡವಳಿಯಲ್ಲಿ ತೀರ್ಮಾನಿಸಿದಂತೆ "ಅಂತರ ರಾಷ್ಟ್ರೀಯ ಕೃಷಿ ವ್ಯಾಪಾರ ಮೇಳ" ಎಂಬ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ರೂ. 500 ಲಕ್ಷಗಳನ್ನು "Green Life International, Poojenahally" ಸಂಸ್ಥೆಗೆ ಬಿಡುಗಡೆಗೊಳಿಸುವುದಕ್ಕೆ ತೋಟಗಾರಿಕೆ ನಿರ್ದೇಶಕರು ಮೇಲೆ ಓದಲಾದ (4)ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ತೋಟಗಾರಿಕೆ ನಿರ್ದೇಶಕರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 19 ತೊಯೋಕಾ 2008, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಗಳ ಹಿನ್ನೆಲೆಯಲ್ಲಿ 2007–08ನೇ ಸಾಲಿನಲ್ಲಿ "ಅಂತರ ರಾಷ್ಟ್ರಿಯ ಕೃಷಿ ವ್ಯಾಪಾರ ಮೇಳ" ಎಂಬ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು "Green Life International, Poojenahally" ಎಂಬ ಸಂಸ್ಥೆಗೆ ಲೆಕ್ಕಶೀರ್ಷಿಕೆ 2401–00–800–2–35 (ಯೋಜನೆ) ರಡಿ ರೂ. 500 ಲಕ್ಷಗಳನ್ನು (ರೂ. ಐದುನೂರು ಲಕ್ಷಗಳು ಮಾತ್ರ) ಕೆಳಕಾಣಿಸಿದ ವೆಚ್ಚದ ವಿವರದ ಅನ್ವಯ ಅನುಷ್ಠಾನಗೊಳಿಸಲು ಬಿಡುಗಡೆಮಾಡಲಾಗಿದೆ.

| ಕ್ರ.ಸಂ. | ಕಾರ್ಯಕ್ರಮದ ವಿವರ | ಆರ್ಥಿಕ (ರೂ.ಲಕ್ಷಗಳಲ್ಲಿ) |
|---|---|---|
| 1 | ರಕ್ಷಣಾ ವ್ಯವಸ್ಥೆ (ಕಾಂಪೌಂಡ್ ಗೋಡೆ ನಿರ್ಮಾಣ ಕಾಮಗಾರಿ) | 50.00 |
| 2 | ನೀರಾವರಿ ವ್ಯವಸ್ಥೆ ಮತ್ತು ವಿದ್ಯುಚ್ಛಕ್ತಿ ವ್ಯವಸ್ಥೆ | 10.00 |
| 3 | ಮಳೆ ನೀರು ಸಂಗ್ರಹಣೆ ಮತ್ತು ಭೂಮಿ ಸಿದ್ಧತೆ ಕೆಲಸಗಳು | 10.00 |
| 4 | ಕಾಂಟೌರ್ ಸರ್ವೆ (Contour Survey), ಗ್ರೌಂಡ್ ಪ್ಲಾನ್ (Ground Plan) Architects and Consultancy Charges | 10.00 |
| 5 | ಸಿವಿಲ್ ಕಾಮಗಾರಿಗಳಿಗೆ ತಳಪಾಯ ಹಾಕಲು<br>(Foundation for civil works)<br>a) ಕ್ರಾಪ್ ಮ್ಯೂಸಿಯಂ ವಿಭಾಗಗಳು (Crop Museum Blocks)<br>b) ಪ್ರದರ್ಶನ ಮಳಿಗೆಗಳು (Exhibition halls)<br>c) ಸಮ್ಮೇಳನ ಸಭಾಂಗಣ (Conventional Hall)<br>d) ತರಬೇತಿ ಕೇಂದ್ರ (Training Centre) ಇತ್ಯಾದಿ | 415.00 |
| 6 | ಸಿಬ್ಬಂದಿ ವೆಚ್ಚ ಮತ್ತು ಇತರೆ ವೆಚ್ಚ | 5.00 |
| | **ಒಟ್ಟು (ರೂ. ಐದು ನೂರು ಲಕ್ಷಗಳು ಮಾತ್ರ)** | **500.00** |

"Green Life International, Poojenahally" ಸಂಸ್ಥೆಯು ಈ ಬಗ್ಗೆ ಅನುದಾನದ (Grant-in-Aid) ಬಿಲ್ಲಿನ್ನು ತೋಟಗಾರಿಕೆ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು. ಸದರಿ ಅನುದಾನ ಬಿಲ್ಲಿಗೆ ಮೇಲು ಸಹಿ ಮಾಡಲು ತೋಟಗಾರಿಕೆ ಆದೇಶ ನೀಡಲಾಗಿದೆ.

ಬೆಂಗಳೂರು ಅಂತರಾಷ್ಟ್ರೀಯ ಕೃಷಿ ವ್ಯಾಪಾರ ಮೇಳದ ವಿವರವಾದ ಪ್ರಾಜೆಕ್ಟ್ ವರದಿಯನ್ನು ಶೀಘ್ರವಾಗಿ ಅಂತಿಮಗೊಳಿಸಿ ಸದರಿ ವರದಿಗೆ ಸರ್ಕಾರದ ಅನುಮೋದನೆ ಪಡೆಯುವಂತೆ ತೋಟಗಾರಿಕೆ ನಿರ್ದೇಶಕರಿಗೆ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 76 ವೆಚ್ಚ.4/08, ದಿನಾಂಕ 6–3–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 475

**ಎಸ್. ರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ

## ಕಂದಾಯ ಸಚಿವಾಲಯ

**ಸಂಖ್ಯೆ: ಕಂಇ 172 ಆರ್‌ಇಹೆಚ್ 2005, ಬೆಂಗಳೂರು, ದಿನಾಂಕ 7ನೇ ಮಾರ್ಚ್ 2008**

**ತಿದ್ದುಪಡಿ**

**ವಿಷಯ :** ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ ರಚನೆ ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಕಂಇ 172 ಆರ್‌ಇಹೆಚ್ 2005, ದಿನಾಂಕ 11–1–2007.

ಮೇಲೆ ಓದಲಾದ ದಿನಾಂಕ 11–1–2007ರ ಸರ್ಕಾರಿ ಆದೇಶದಲ್ಲಿ, ಆದೇಶ ಭಾಗದಲ್ಲಿ ವಿಶೇಷಾಧಿಕಾರಿ ನೇಮಕಕ್ಕೆ ಸಂಬಂಧಿಸಿದ ಖಂಡಿಕೆಯನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಈ ಬಗ್ಗೆ ಕಾನೂನು ರಚನೆಯಾಗಿ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರವು ಪೂರ್ಣ ಪ್ರಮಾಣದಲ್ಲಿ ಕಾರ್ಯನಿರ್ವಹಿಸುವವರೆಗೆ ಪ್ರಾಧಿಕಾರದ ಅಭಿವೃದ್ಧಿ ಕಾರ್ಯಗಳ ನಿರ್ವಹಣೆ, ಉಸ್ತುವಾರಿಗೆ ಸಂಬಂಧಿಸಿದ ಎಲ್ಲಾ ಕಾರ್ಯಗಳನ್ನು ನಿರ್ವಹಿಸಲು ಶ್ರೀ ಎಸ್.ಎಂ. ಜಾಮ್‌ದಾರ್, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರನ್ನು ವಿಶೇಷಾಧಿಕಾರಿಯನ್ನಾಗಿ ನೇಮಿಸಲಾಗಿದೆ".

ಭಾರತದ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪುನರ್ವಸತಿ)

**ಸಂಖ್ಯೆ: ಕಂಇ 211 ಆರ್‌ಇಹೆಚ್ 2005, ಬೆಂಗಳೂರು, ದಿನಾಂಕ 7ನೇ ಮಾರ್ಚ್ 2008**

**ತಿದ್ದುಪಡಿ**

**ವಿಷಯ :** ಸನ್ನತಿ ಅಭಿವೃದ್ಧಿ ಕಾಮಗಾರಿಗಳ ಉಸ್ತುವಾರಿ ನೋಡಿಕೊಳ್ಳಲು ವಿಶೇಷಾಧಿಕಾರಿ ಮತ್ತು ಆಯುಕ್ತರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಕಂಇ 211 ಆರ್‌ಇಹೆಚ್ 2005 (II), ದಿನಾಂಕ 14–11–2006.

ಮೇಲೆ ಓದಲಾದ ದಿನಾಂಕ 14–11–2006ರ ಸರ್ಕಾರಿ ಆದೇಶದಲ್ಲಿ, ಆದೇಶ ಭಾಗದಲ್ಲಿ ವಿಶೇಷಾಧಿಕಾರಿ ನೇಮಕಕ್ಕೆ ಸಂಬಂಧಿಸಿದ ಖಂಡಿಕೆಯನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಎಸ್.ಎಂ. ಜಾಮ್‌ದಾರ್, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರನ್ನು ಸನ್ನತಿ ಅಭಿವೃದ್ಧಿ ಮಂಡಳಿಯ ಕಾಮಗಾರಿಗಳ ನಿರ್ವಹಣೆ ಮತ್ತು ಉಸ್ತುವಾರಿಗೆ ಸಂಬಂಧಿಸಿದ ಎಲ್ಲಾ ಕಾರ್ಯಗಳನ್ನು ನಿರ್ವಹಿಸಲು ವಿಶೇಷಾಧಿಕಾರಿಯನ್ನಾಗಿ ನೇಮಿಸಲಾಗಿದೆ".

ಭಾರತದ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪುನರ್ವಸತಿ)

**ಸಂಖ್ಯೆ: ಕಂಇ 147 ಆರ್‌ಇಹೆಚ್ 2003, ಬೆಂಗಳೂರು, ದಿನಾಂಕ 7ನೇ ಮಾರ್ಚ್ 2008**

**ತಿದ್ದುಪಡಿ**

**ವಿಷಯ :** ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯ ಕಾಮಗಾರಿಗಳ ಉಸ್ತುವಾರಿ ನೋಡಿಕೊಳ್ಳಲು ವಿಶೇಷಾಧಿಕಾರಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಅಧಿಸೂಚನೆ ಸಂಖ್ಯೆ: ಆರ್‌ಡಿ 147 ಆರ್‌ಇಹೆಚ್ 2003, ದಿನಾಂಕ 19–1–2004.

ಮೇಲೆ ಓದಲಾದ ದಿನಾಂಕ 19–1–2004ರ ಸರ್ಕಾರಿ ಅಧಿಸೂಚನೆಯಲ್ಲಿ, ಶ್ರೀ ಎಸ್.ಎಂ. ಜಾಮ್‌ದಾರ್, ಐ.ಎ.ಎಸ್, ಆಯುಕ್ತರು, (ಪು ಮತ್ತು ಪು) ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಇವರನ್ನು ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯ ವಿಶೇಷಾಧಿಕಾರಿಯನ್ನಾಗಿ ನೇಮಕ ಮಾಡಿರುವುದನ್ನು ಈ ಕೆಳಕಂಡಂತೆ ಮಾರ್ಪಡಿಸಿದೆ.

ಶ್ರೀ ಎಸ್.ಎಂ. ಜಾಮ್‌ದಾರ್, ಐ.ಎ.ಎಸ್. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರನ್ನು ಬಸವಕಲ್ಯಣ ಅಭಿವೃದ್ಧಿ ಮಂಡಳಿಯ ವಿಶೇಷಾಧಿಕಾರಿಯನ್ನಾಗಿ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ".

ಭಾರತದ ರಾಷ್ಟ್ರಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.476

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪುನರ್ವಸತಿ)

## HOME SECRETARIAT

**Sub :** Attestation of documents payment of attestation fee through Bangalore one Centre-reg.

**Read :**
1. G.O. No. HD 413 PMS 2007, dated 2-11-2007
2. U.O. Note No. DPAR 23 EGU 2008, dated: 13-2-2008.

**Preamble:**

Government in their order dated 2-11-2007 read at (1) above, have specified the guidelines and modalities regarding attestation of original documents in the Home Department. The candidates who desire attestation of original documents are required to pay an attestation fee of Rs. 105 (Rupees one hundred and five only) per documents. As per the existing system the attestation fee is payable directly by the candidates to the DPAR (Accounts) under the Head of Account as detailed below:

| Sl.No. | Details | Head of Account | Amount |
|---|---|---|---|
| 1. | Attestation Free | 0070-80-800-3-03<br>General Administration | 100.00 |
| 2. | Court Fee | 0030-01-101-0-01<br>Stamps and Registration | 5.00 |
| | | **Total Rs.** | **105.00** |

2) D.P.A.R. (E-Governance) in its U.O. Note dated 13-2-2008 read at (2) above, have sent proposals to the Home Department with regard to the payment of attestation fee through Bangalore-one centers located in various parts of the Bangalore city. The DPAR (E-Governance) has proposed that Rs.5/- be charged per transaction irrespective of the amount collected per transaction and it is also proposed that transaction charges/ commission will be retained by Bangalore-one at the time of transferring funds to the Home Department.

3) Government have examined the question of collection of fees at Bangalore-one Centres in addition to the existing system of payment of attestation fees by cash at DPAR (Accounts) and have decided to extend the benefit of payment of attestation fee through Bangalore-one centres to the persons seeking attestation of original documents. Hence the order.

**Government Order No. HD 413 PMS 2007, Bangalore, Dated 16th April 2008**

After careful consideration sanction of the Government is hereby accorded for payment attestation fee of Rs. 105 per documents/authentication of documents/ certificates by Home Department

through the Bangalore-one citizen service centres located across various parts of the Bangalore City under the following Head of Account.

| Sl.No. | Details | Head of Account | Amount |
|---|---|---|---|
| 1. | Attestation Free | 0070-80-300-3-03<br>General Administration | 100.00 |
| 2. | Court Fee | 0030-01-101-0-01<br>Stamps and Registration | 5.00 |
| | | **Total Rs.** | **105.00** |

2) All the Bangalore-one centres located in the Bangalore city are authorized to collect the said attestation fee from the general public.

3) The System of payment through Bangalore-one centres is in addition to the existing system of payment through DPAR (Accounts). The Drawing Officer code is 0200 DP0001.

4) The Bangalore-one center shall retain transaction charge of Rs. 5/- (Rupees five only) out of the attestation of Rs. 100/- (Rupees one hundred only) per document and transfer the balance to the Home Department through Government Treasury. A monthly report on the balance amount transferred shall be submitted to the Home Department.

5) The attestation fee of Rs. 105/- per document is in addition to the verification fee prescribed by the Boards/Universities etc., authorities.

6) This order shall come into force with immediate effect.

This order issues with the concurrence of Finance Department vide their U.O. Note No. FD 295 Exp-6/2008 dated 15-4-2008.

By order and in the name of the President of India,

PR. 797

**M.S. MAHANTESHAIAH**
Under Secretary to Government,
Home Department
(Passport and Foreigners)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಟಿ.ಎಸ್. ವೆಂಕಣ್ಣಯ್ಯನವರ ಜನ್ಮಸ್ಥಳವಾದ ತಳಕು ಗ್ರಾಮದ ಅಭಿವೃದ್ಧಿಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ಸಂಖ್ಯೆ: ಕಸನಿ:10:ಹೊ:ಯೋ:2007–08, ದಿನಾಂಕ 25–3–2008.

**ಪ್ರಸ್ತಾವನೆ :**

ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆರವರ 2007–08ನೇ ಸಾಲಿನ ಆಯವ್ಯಯದಲ್ಲಿ ಟಿ.ಎಸ್. ವೆಂಕಣ್ಣಯ್ಯನವರ ಜನ್ಮಸ್ಥಳವಾದ ತಳಕು ಗ್ರಾಮದ ಅಭಿವೃದ್ಧಿಗೆ ರೂ. 1.50 ಕೋಟಿಗಳನ್ನು ಹಂಚಿಕೆ ಮಾಡಿದ್ದು, ಕಾರ್ಯಪಾಲಕ ಇಂಜಿನಿಯರ್, ಪಿ.ಡಬ್ಲ್ಯೂ.ಡಿ. ವಿಭಾಗ, ಚಿತ್ರದುರ್ಗ ಇವರು ಜಿಲ್ಲಾಧಿಕಾರಿ, ಚಿತ್ರದುರ್ಗ ಜಿಲ್ಲೆ ರವರ ಮೂಲಕ ಅಂದಾಜು ಪಟ್ಟಿ ಹಾಗೂ ನೀಲಿ ನಕಾಶೆಗಳನ್ನು ಸಲ್ಲಿಸಿದ್ದಾರೆಂದು ತಿಳಿಸಿದ್ದಾರೆ. ಮುಂದುವರಿದು ಈ ಕಾರ್ಯಕ್ರಮಕ್ಕಾಗಿ ಹಂಚಿಕೆ ಮಾಡಲಾದ ರೂ. 1.50 ಕೋಟಿಗಳಲ್ಲಿ ರೂ. 35.00 ಲಕ್ಷ ಹಣವನ್ನು ಇತರೆ ಕಾರ್ಯಕ್ರಮಕ್ಕಾಗಿ ವಿನಿಯೋಗ ಮಾಡುತ್ತಿರುವ ಕಾರಣ ಟಿ.ಎಸ್. ವೆಂಕಣ್ಣಯ್ಯನವರ ಜನ್ಮಸ್ಥಳವಾದ ತಳಕು ಗ್ರಾಮದ ಅಭಿವೃದ್ಧಿಗಾಗಿ ಉಳಿಕೆ ಮೊತ್ತವಾದ ರೂ.1.15 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

**ಆದೇಶ ಸಂಖ್ಯೆ: ಕಸಂವಾಪ್ರ 124 ಕಸನಿ 2007, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2008.**

ಟಿ.ಎಸ್. ವೆಂಕಣ್ಣಯ್ಯನವರ ಜನ್ಮಸ್ಥಳವಾದ ತಳಕು ಗ್ರಾಮದ ಅಭಿವೃದ್ಧಿಗಾಗಿ ರೂ. 1.15 ಕೋಟಿಗಳನ್ನು (ಒಂದು ಕೋಟಿ ಹದಿನೈದು ಲಕ್ಷ ರೂಪಾಯಿಗಳು ಮಾತ್ರ) ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರಿಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಮಂಜೂರಾತಿ ನೀಡಲಾಗಿದೆ.

1. ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸುವುದು.
2. ಸರ್ಕಾರ ಮಂಜೂರು ಮಾಡಿದ ಹಣಕ್ಕೆ ಲೆಕ್ಕಪರಿಶೋಧಕರಿಂದ ದೃಢೀಕರಿಸಿದ ವೆಚ್ಚಪಟ್ಟಿ ಹಾಗೂ ಹಣಬಳಕೆ ಪ್ರಮಾಣಪತ್ರವನ್ನು (ದ್ವಿಪ್ರತಿಯಲ್ಲಿ) ಸಲ್ಲಿಸುವುದು.
3. ಅಭಿವೃದ್ಧಿ ಕಾಮಗಾರಿ ಕಾರ್ಯಪ್ರಗತಿ ಬಗ್ಗೆ ಆಗಿಂದಾಗ್ಗೆ ಇಲಾಖೆಗೆ ವರದಿ ಸಲ್ಲಿಸುವುದು.
4. ಅಭಿವೃದ್ಧಿ ಕಾಮಗಾರಿಯನ್ನು ಅತ್ಯಂತ ತ್ವರಿತವಾಗಿ ಪೂರ್ಣಗೊಳಿಸುವುದು.

ಈ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–102–1–87–059 (ಯೋಜನೆ) ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 1343/ವೆಚ್ಚ–5/2007, ದಿನಾಂಕ 20–7–2007 ಹಾಗೂ ಯೋಜನಾ ಇಲಾಖೆಯು ಟಿಪ್ಪಣಿ ಸಂಖ್ಯೆ: ಯೋಇ:126: ಜಶ:2007, ದಿನಾಂಕ 25–7–2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 799

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## HORTICULTURE SECRETARIAT

**Sub :** "Scheme for Integrated Farming in Coconut for Productivity/ Improvement with Coconut Development Board Assistance (100% CDB)" Head of account 2401-00-108-2-35- Administrative approval for additionality regarding.

**Read :**
1) G.O. No. AHD 53 HPP 2007, dated 13-7-2007.
2) G.O. No. AHD 145 HPP 2007, dated 7-1-2008.
3) Letter of CDB No. F.No. 597/2007 Dev (Kar) dated 13-2-2008.
4) Letter of Director of Horticulture No. DH/PC/AHO-2/41/2007-08-3544 dated 29-2-2008 and 6-3-2008.

**Preamble:**

The State Government had accorded administrative approval for implementing the Coconut Development Programmes for the year 2007-08 at a cost of Rs. 224.985 lakhs (Rs. 49.685 lakhs CDB + Rs. 175.300 lakhs through Department of Horticulture, Government of Karnataka) vide Government Order read at (1) above.

Further, State Government had accorded administrative approval for implementation of the scheme "Production and distribution planting material –TxD seedlings" under the Head of Account 2401-00-108-02-35 during 2007-08 at total cost of Rs. 6.25 lakhs on 50:50 basis between Coconut Development Board and the State as per Government Order read at (2) above. Thus, administrative approval had been accorded for Rs. 231.235 lakhs (Rs. 49.685 lakhs CDB + Rs. 181.55 lakhs through Department of Horticulture, Government of Karnataka).

Now, Coconut Development Board has provided Rs. 24.50 lakhs for laying out demonstration plots on cluster basis for 1st year on 140 hectares vide Coconut Development Board letter read at (3) above.

The Director of Horticulture has informed that this amount has been provided by Coconut Development Board on project basis for Mysore and Chamarajnagar districts and has requested for administrative approval of the State Government for implementation of the programme with 100% CDB assitance under the Head of account 2401-00-108-2-35 in District Sector, as additionality.

Hence this order.

**Government Order No. AHD 53 HPP 2007, Bangalore, Dated 10th March 2008**

Government is pleaded to accord administrative approval for implementing the additionality of Rs.24.50 lakhs (Rupees Twenty Fourt Lakhs and Fifty Thousand only) under Coconut Development Programmes during the year 2007-2008. It will be 100% CDB assistance to be implemented under

District Sector under the "Scheme for Integrated Farming in Coconut for Productivity/ Improvement with Coconut Development Board Assistance (100% CDB)" under Head of account 2401-00-108-2-35.

The programme details are as below:

| Sl.No. | Villages clusters | No. of beneficiaries | Area | Amount Rs in Lakhs |
|---|---|---|---|---|
| 1 | Mysore district,<br>Nanjanagudu taluk,<br>Chikkahonur,<br>Dodda honur,<br>Avatalpura | <br><br>26<br>31<br>17 | 40 ha. | 7.00 |
| 2 | Chamarajanagar district,<br>Chamarajanagar taluk<br>Chandakavadi<br>Doddiahalli<br>Hebbasuru | <br><br>3<br>4<br>16 | 100 ha. | 17.50 |
| | **Total** | **97** | **140 ha.** | **24.50** |

The Scheme will be implemented strictly as per the guidelines issued in the Government Order read at (1) above.

By order and in the name of the President of India,

PR. 435

**S. RAJU**

Under Secretary to Government,

Horticulture Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 34 ಎಸ್‌ಇಎಂ 96, ದಿನಾಂಕ 19–2–1997.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3 ಸಸಿವಿ 98, ದಿನಾಂಕ 24–4–1998.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 98, ದಿನಾಂಕ 24–9–1998.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 99 ದಿನಾಂಕ 3–4–1999.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 37 ಸಸಿವಿ 01 ದಿನಾಂಕ 23–10–2001.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 101 ಸಸಿವಿ 05 ದಿನಾಂಕ 10–1–2006.
7. ಅನಧಿಕೃತ ಟಿಪ್ಪಣಿ : ಆಇ 72 ಪಿಎಂಯು 2007 ದಿನಾಂಕ 16–11–2007.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿ ಕೆಳಕಂಡ ಸಿಬ್ಬಂದಿಗಳನ್ನು ಒಳಗೊಂಡಂತೆ ಯೋಜನಾ ಮೇಲ್ವಿಚಾರಣಾ ಘಟಕವನ್ನು ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| | | |
|---|---|---|
| 1 | ಅ. ಜಂಟಿ /ಉಪ ಕಾರ್ಯದರ್ಶಿ<br>ಆ. ಶೀಘ್ರಲಿಪಿಗಾರರು<br>ಇ. ಕಿರಿಯ ಸಹಾಯಕರು | 1<br>1<br>1 |
| 2 | ಅಕೌಂಟ್ಸ್ ಆಫೀಸರ್ (ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯಪತ್ರ ಇಲಾಖೆಯಿಂದ ನಿಯೋಜಿಸುವುದು) | 1 (ವೇತನ ಶ್ರೇಣಿ ರಹಿತ ಹುದ್ದೆ) |
| 3 | ಸಂಶೋದನಾಧಿಕಾರಿ : ಸ್ಟ್ಯಾಸ್ಟಿಕಲ್ ಅನಾಲಿಸ್ಟ್ (ಸಾಂಸ್ಥಿಕ ಹಾಗೂ ಸಾಂಖ್ಯಿಕ ಇಲಾಖೆಯ ಗಣಕ ಯಂತ್ರ ಜ್ಞಾನವನ್ನು ಹೊಂದಿರುವ ಅಧಿಕಾರಿಯನ್ನು ನಿಯೋಜಿಸುವುದು) | 1 (ವೇತನ ಶ್ರೇಣಿ ರಹಿತ ಹುದ್ದೆ) |
| 4 | ಪ್ರೋಗ್ರಾಮರ್ | 1 |
| 5 | ಶೀಘ್ರಲಿಪಿಗಾರರು/ ಡಾಟಾ ಎಂಟ್ರಿ ಆಪರೇಟರ್ | 1 |

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ಕೆಳಕಂಡ ಹೆಚ್ಚುವರಿ ಹುದ್ದೆಗಳನ್ನು ಸೃಜಿಸಲಾಗಿದೆ.

| | | |
|---|---|---|
| 1 | ಸಂಶೋಧನಾಧಿಕಾರಿ ಮತ್ತು ಪದನಿಮಿತ್ತ ಅಪರ ನಿರ್ದೇಶಕರು/ ಸಹ ನಿರ್ದೇಶಕರು/ ಉಪ ನಿರ್ದೇಶಕರು, ಯೋಜನಾ ಮೇಲ್ವಿಚಾರಣಾ ಘಟಕ | 2 (ವೇತನ ಶ್ರೇಣಿ ರಹಿತ ಹುದ್ದೆ) |
| 2 | ಶಾಖಾಧಿಕಾರಿ | 1 |
| 3 | ಹಿರಿಯ ಸಹಾಯಕರು | 1 |
| 4 | ಶೀಘ್ರಲಿಪಿಗಾರರು | 1 |
| 5 | ಬೆರಳಚ್ಚುಗಾರರು | 1 |
| 6 | ಟೆಕ್ನೀಷಿಯನ್ (ಗ್ರೂಪ್–ಡಿ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ) | 1 |

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆ, ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ಒಂದು ವಾಹನ ಚಾಲಕರ ಹುದ್ದೆಯನ್ನು ದಿನಾಂಕ 19–2–1997ರ ಸರ್ಕಾರದ ಆದೇಶದಲ್ಲಿ ಸೃಜಿಸಲಾಗಿರುತ್ತದೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ದಿನಾಂಕ 19–2–1999ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ ಹಾಗೂ ಈ ಹುದ್ದೆಗಳ ಅವಧಿಗೆ ಕೊನೆಗೊಳ್ಳುವಂತೆ ಒಂದು ಡಾಟಾ ಎಂಟ್ರಿ ಆಪರೇಟರ್ ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಹುದ್ದೆಗಳ ಚಾಲ್ತಿಯ ಅವಧಿಗೆ, ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ. ಹಾಗೂ "ಸಂಶೋಧನಾಧಿಕಾರಿ : ಸ್ಟ್ಯಾಟಿಸ್ಟಿಕಲ್ ಅನಾಲಿಸ್ಟ್" ಹುದ್ದೆಯನ್ನು "ಸಹಾಯಕ ನಿರ್ದೇಶಕರು : ಉಪ ನಿರ್ದೇಶಕರು" ಹುದ್ದೆ ಎಂದು ಪುನರ್ ಪದನಾಮೀಕರಿಸಲಾಗಿದೆ.

1. ಹಿರಿಯ ಸಹಾಯಕರು 1
2. ಸಹಾಯಕ 1
3. ಕಿರಿಯ ಸಹಾಯಕ 1

ನಂತರ ಮೇಲೆ (6)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಎಲ್ಲಾ ಹುದ್ದೆಗಳನ್ನು ದಿನಾಂಕ 19–2–2006 ರಿಂದ ಮತ್ತೆ 2 ವರ್ಷಗಳ ಅವಧಿಗೆ ಮುಂದುವರೆಸಲಾಗಿದ್ದು, ಸದರಿ ಹುದ್ದೆಗಳ ಮುಂದುವರಿಕೆಯು ದಿ: 18–2–2008ರಂದು ಮುಕ್ತಾಯವಾಗುವುದರಿಂದ ಸದರಿ ಹುದ್ದೆಗಳನ್ನು ದಿನಾಂಕ 19–2–2008 ರಿಂದ ಮತ್ತೆ 3 ವರ್ಷಗಳ ಅವಧಿಗೆ ಮುಂದುವರಿಸುವಂತೆ ಮೇಲೆ (7)ರಲ್ಲಿ ಓದಲಾದ ದಿನಾಂಕ 16–11–2007ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಕೋರಿದೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 705 ಸಅಸೇ 2007, ಬೆಂಗಳೂರು, ದಿನಾಂಕ: 1ನೇ ಏಪ್ರಿಲ್ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿನ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ 19–2–2008ರಿಂದ ಮೂರು ವರ್ಷಗಳ ಅವಧಿಗೆ ಮುಂದುವರಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಅ. ಜಂಟಿ /ಉಪ ಕಾರ್ಯದರ್ಶಿ<br>ಆ. ಶೀಘ್ರಲಿಪಿಗಾರರು<br>ಇ. ಕಿರಿಯ ಸಹಾಯಕರು | 1<br>1<br>1 |
| 2 | ಅಕೌಂಟ್ಸ್ ಆಫೀಸರ್ (ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯಪತ್ರ ಇಲಾಖೆಯಿಂದ ನಿಯೋಜಿಸುವುದು) | 1 (ವೇತನ ಶ್ರೇಣಿ ರಹಿತ ಹುದ್ದೆ) |
| 3 | ಸಹಾಯಕ ನಿರ್ದೇಶಕರು/ ಉಪ ನಿರ್ದೇಶಕರು | 1 (ವೇತನ ಶ್ರೇಣಿ ರಹಿತ ಹುದ್ದೆ) |
| 4 | ಪ್ರೋಗ್ರಾಮರ್ | 1 |
| 5 | ಶೀಘ್ರಲಿಪಿಗಾರರು/ ಡಾಟಾ ಎಂಟ್ರಿ ಆಪರೇಟರ್ | 1 |
| 6 | ಸಂಶೋಧನಾಧಿಕಾರಿ ಮತ್ತು ಪದನಿಮಿತ್ತ ಅಪರ ನಿರ್ದೇಶಕರು/ ಸಹನಿರ್ದೇಶಕರು/ ಉಪ ನಿರ್ದೇಶಕರು, ಯೋಜನಾ ಮೇಲ್ವಿಚಾರಣಾ ಘಟಕ | 2 (ವೇತನ ಶ್ರೇಣಿ ರಹಿತ ಹುದ್ದೆ) |

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 7 | ಶಾಖಾಧಿಕಾರಿ | 1 |
| 8 | ಹಿರಿಯ ಸಹಾಯಕರು | 1 |
| 9 | ಶೀಘ್ರಲಿಪಿಗಾರರು | 1 |
| 10 | ಬೆರಳಚ್ಚುಗಾರರು | 1 |
| 11 | ಟೆಕ್ನೀಷಿಯನ್ (ಗ್ರೂಪ್–ಡಿ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ) | 1 |
| 12 | ವಾಹನ ಚಾಲಕ | 1 |
| 13 | ಡಾಟಾ ಎಂಟ್ರಿ ಆಪರೇಟರ್ | 1 |
| 14 | ಹಿರಿಯ ಸಹಾಯಕರು | 1 |
| 15 | ಸಹಾಯಕ | 1 |
| 16 | ಕಿರಿಯ ಸಹಾಯಕ | 1 |
| | **ಒಟ್ಟು** | **19** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 121 ವೆಚ್ಚ.5/08, ದಿನಾಂಕ 27–2–2008ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 591

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**INFRASTRUCTURE DEVELOPMENT SECRETARIAT**

**Sub :** Release of State share towards Munirabad-Mehboobnagar New Railway Project.

**Read :** G.O. No. IDD 13 NSW 2007, dated 11-9-2007.

**Preamble:**

In the Government Order dated 11-9-2007 read at (1) above, the state Government has accorded sanction for taking up Munirabad-Mehboobnagar new railway project on 50:50 cost sharing basis between the Ministry of Railways and Government of Karnataka and for sharing 50% (Rs. 350.00 crore) of the project cost and to complete this project within a period of 3-4 years.

2. The Munirabad-Mehaboobnagar new railway project has been included in the Railway Budget 2007-08 and an amount of Rs. 5.00 crore has been released by the Ministry of Railways. As such the State Government has to release its matching share.

3. Hence this order.

**Government Order No. IDD 01 NSW 08, Bangalore, Dated 7/11th March 2008**

In the circumstances mentioned above, Government of Karnataka is pleased to release an amount of Rs. 5.00 crore (Rupees five crore) only towards the share of the state government for the Munirabad-Mehaboobnagar new railway project.

2. The expenditure shall be met under the Head of Account 5465-01-190-3-05-(P)-211-Investments – Cost sharing for new projects out of the budgeted amount for the year 2007-08.

3. The Chief Financial Officer & Company Secretary, iDeCK is authorized to draw the amount on a payee's receipt duly countersigned by the Under Secretary to Government, Infrastructure Development Department and iDeCK shall in turn deposit the same with the Financial Advisor and Chief Administrative Officer, SWR, Bangalore.

4. This order is issued in accordance with the concurrence of Finance Department given vide U.O.N. No. FD 242 Exp-I/ 08 dated 25-2-2008.

By order and in the name of the President of India,

PR. 442

**N. MANJULA GEETHA**

Under Secretary to Government,

Infrastructure Development Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಮೈಸೂರು ಅರಮನೆ ಉಸ್ತುವಾರಿಗಾಗಿ ಮಂಜೂರಾಗಿರುವ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 2 ಪಿಎಸ್ಆರ್ 76, ದಿ: 26–2–76.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 29 ಸೇಅವಿ 2001, ದಿ: 9–8–2002.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 26 ಸೇಅವಿ 2007, ದಿ: 11–4–2007.
4. ಕಾರ್ಯನಿರ್ವಹಣಾಧಿಕಾರಿ, ಅರಮನೆ ಮಂಡಳಿ, ಮೈಸೂರು ಇವರ ಪತ್ರ ಸಂಖ್ಯೆ: ಕಾನಿಅ: ಅಮಂ: ಸಂಖ್ಯಾರಿಕ್ತ ಹುದ್ದೆ: 270: 2007–08, ದಿನಾಂಕ 31–1–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಮೈಸೂರು ಅರಮನೆ ಉಸ್ತುವಾರಿಗಾಗಿ ಕೆಲವು ತಾತ್ಕಾಲಿಕ ಹುದ್ದೆಗಳನ್ನು ಮಂಜೂರು ಮಾಡಲಾಗಿದೆ. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ. 5,200–9,500ರ ವೇತನ ಶ್ರೇಣಿಯ ಒಂದು ಕಛೇರಿ ಅಧೀಕ್ಷಕರ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಈ ಎಲ್ಲಾ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸುತ್ತಾ ಬಂದಿದ್ದು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ 114 ವಿವಿಧ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 31–3–2008ರ ವರೆಗೆ ಮುಂದುವರೆಸಲಾಗಿದೆ. ಮೇಲೆ (4)ರಲ್ಲಿ ಓದಲಾಗಿರುವ ಪತ್ರದಲ್ಲಿ ಕಾರ್ಯನಿರ್ವಕಾಧಿಕಾರಿ, ಮೈಸೂರು ಅರಮನೆ ಮಂಡಳಿ, ಮೈಸೂರು, ಇವರು ಮೇಲೆ ಉಲ್ಲೇಖಿಸಿರುವ 114 ವಿವಿಧ ಹುದ್ದೆಗಳ ಅವಧಿಯು ದಿನಾಂಕ 31–3–2008ಕ್ಕೆ ಅಂತ್ಯಗೊಳ್ಳುವುದರಿಂದ ಎಲ್ಲಾ ಹುದ್ದೆಗಳನ್ನು ದಿನಾಂಕ 1–4–2008 ರಿಂದ 31–3–2009ರವರೆಗೆ ಒಂದು ವರ್ಷದ ಅವಧಿಗೆ ಮುಂದುವರೆಸಿ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಸೇಅವಿ 2008, ಬೆಂಗಳೂರು, ದಿನಾಂಕ: 4ನೇ ಏಪ್ರಿಲ್ 2008.**

ಮೈಸೂರು ಅರಮನೆ ಮಂಡಳಿ, ಮೈಸೂರು ಇಲ್ಲಿ ಅರಮನೆ ಉಸ್ತುವಾರಿಗಾಗಿ ಸೃಜಿಸಲಾಗಿರುವ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ–1 ರಿಂದ 9 ರವರೆಗೆ ನಮೂದಿಸಿರುವ 114 ವಿವಿಧ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 1–4–2008 ರಿಂದ 31–3–2009 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2205– ಕಲೆ ಮತ್ತು ಸಂಸ್ಕೃತಿ 107 ಸಂಗ್ರಹಾಲಯ –04 ಮೈಸೂರು ಅರಮನೆ ಉಸ್ತುವಾರಿ ವೇತನ (ಯೋಜನೇತರ) ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996 ದಿನಾಂಕ 10–7–1996ರಲ್ಲಿ ಇಲಾಖೆಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಸೇಅವಿ 2008, ದಿನಾಂಕ 4ನೇ ಏಪ್ರಿಲ್ 2008**

**ಅನುಬಂಧ–1**

| ಕ್ರ.ಸಂ. | ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸಹಾಯಕ ಇಂಜಿನಿಯರ್ (ಸಿವಿಲ್) | 2 |
| 2 | ಪ್ರಥಮ ದರ್ಜೆ ಅಕೌಂಟ್ಸ್ ಸಹಾಯಕ | 1 |
| 3 | ಪ್ರಥಮ ದರ್ಜೆ ಪಿ.ಡಬ್ಲ್ಯೂ.ಡಿ. ಸಹಾಯಕರು | 1 |
| 4 | ಪ್ರಥಮ ದರ್ಜೆ ಸ್ಟೋರ್ ಕೀಪರ್ | 1 |
| 5 | ಎರಡನೇ ದರ್ಜೆ ಸ್ಟೋರ್ ಕೀಪರ್ | 1 |
| 6 | ಎರಡನೇ ದರ್ಜೆ ಪಿ.ಡಬ್ಲ್ಯೂ.ಡಿ. ಸಹಾಯಕರು | 2 |
| 7 | ಬೆರಳಚ್ಚುಗಾರ | 1 |
| 8 | ಅಟೆಂಡರ್ | 3 |
| 9 | ಸಹಾಯಕ ತೋಟಗಾರಿಕೆ ಅಧಿಕಾರಿ (ಗ್ರೇಡ್–1) | 1 |
| 10 | ತೋಟಗಾರಿಕಾ ಸಹಾಯಕ (ದರ್ಜೆ–3) | 2 |

| | | |
|---|---|---|
| 11 | ವಾಚ್‌ಮನ್ | 1 |
| 12 | ಸ್ವೀಪರ್ | 23 |
| 13 | ಮಾಲಿ | 29 |
| 14 | ಪ್ಯೂನ್‌ಗಳು | 2 |
| 15 | ಪ್ಲಂಬರ್ | 1 |

**ಅನುಬಂಧ–2**

| | | |
|---|---|---|
| 1 | ಅಸಿಸ್ಟೆಂಟ್ ಎಕ್ಸಿಕ್ಯೂಟೀವ್ ಇಂಜಿನಿಯರ್ (ಎಲೆಕ್ಟ್ರಿಕಲ್) | 1 |
| 2 | ಸಹಾಯಕ ಇಂಜಿನಿಯರ್ | 2 |
| 3 | ಮೊದಲನೇ ದರ್ಜೆ ಸ್ಟೋರ್ ಕೀಪರ್ | 1 |
| 4 | ಮೊದಲನೇ ದರ್ಜೆ ಪಿ.ಡಬ್ಲ್ಯೂ.ಡಿ. ಸಹಾಯಕ | 1 |
| 5 | ಬೆರಳಚ್ಚುಗಾರ | 1 |
| 6 | ಮೊದಲನೇ ದರ್ಜೆ ವೈರ್‌ಮನ್ : ಮೆಕಾನಿಕ್ | 2 |
| 7 | ಎರಡನೇ ದರ್ಜೆ ವೈರ್‌ಮನ್ : ಮೆಕಾನಿಕ್ | 7 |
| 8 | ಮೆಕಾನಿಕ್ –ಕಂ– ಅಟೆಂಡರ್ | 2 |
| 9 | ಲೈನ್‌ಮನ್ | 8 |
| 10 | ಪ್ಯೂನ್ | 1 |
| 11 | ವಾಚ್‌ಮನ್ | 2 |

**ಅನುಬಂಧ–3**

| | | |
|---|---|---|
| 1 | ಎರಡನೇ ದರ್ಜೆ ಸಹಾಯಕ | 1 |

**ಅನುಬಂಧ–4**

| | | |
|---|---|---|
| 1 | "ಡಿ" ಗ್ರೂಪ್ ಹುದ್ದೆಗಳು | 4 |
| 2 | ಮೊದಲನೇ ದರ್ಜೆ ಸಹಾಯಕ | 1 |

**ಅನುಬಂಧ–5**

| | | |
|---|---|---|
| 1 | ಗೈಡ್ ಲೆಕ್ಚರರ್ | 3 |
| 2 | ಲೆಕ್ಕ ಅಧೀಕ್ಷಕ | 1 |

**ಅನುಬಂಧ–6**

| | | |
|---|---|---|
| 1 | ಕ್ಯೂರೇಟರ್ (ಮೈಸೂರು ಅರಮನೆ) | 1 |

**ಅನುಬಂಧ–7**

| | | |
|---|---|---|
| 1 | ಜಾಡ ಮಾಲಿ | 1 |

**ಅನುಬಂಧ–8**

| | | |
|---|---|---|
| 1 | ಎರಡನೇ ದರ್ಜೆ ಸಹಾಯಕ | 1 |
| 2 | ಅಟೆಂಡರ್ | 1 |

**ಅನುಬಂಧ–9**

| | | |
|---|---|---|
| 1 | ಕಛೇರಿ ಅಧೀಕ್ಷಕರ | 1 |
| | **ಒಟ್ಟು** | **114 ಹುದ್ದೆಗಳು** |

**ಎಂ.ಎಸ್. ಶಿವರಾಮ್**

ಪಿ.ಆರ್. 612

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ :** ಕರ್ನಾಟಕದ ಅಧೀನ ನ್ಯಾಯಲಯಗಳಿಗೆ ಸಮಾನ ರೀತಿಯ ಸಿಬ್ಬಂದಿ ವ್ಯವಸ್ಥೆ ಒದಗಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಲಾ 172 ಎಲ್‌ಸಿಇ 1971, ದಿನಾಂಕ 18–2–1972.
2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ದಿನಾಂಕ 21–10–1997.
3. ಸರ್ಕಾರಿ ಆದೇಶ ಸಂಖ್ಯೆ: ಲಾ 44 ಎಲ್‌ಎಎಂ 2004, ದಿನಾಂಕ 19–4–2004.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಮಾನ ರೀತಿಯ ಸಿಬ್ಬಂದಿ ವ್ಯವಸ್ಥೆ ಒದಗಿಸಲು ಆದೇಶಿಸಿದ್ದು, ಅದರನ್ವಯ 1971–72ರಲ್ಲಿ ಕಾರ್ಯಭಾರವನ್ನು ಪರಿಗಣಿಸಿ ನ್ಯಾಯಲಯಗಳನ್ನು ಸಾಮಾನ್ಯ, ಹೆಚ್ಚು ಮತ್ತು ಅತೀ ಹೆಚ್ಚು ಎಂದು ವಿಂಗಡಿಸಿ ಸಿಬ್ಬಂದಿ ವ್ಯವಸ್ಥೆಯನ್ನು ಪುನರ್‌ರಚಿಸಲಾಯಿತು.

1972 ರಿಂದ ಈಚೆಗೆ ನ್ಯಾಯಾಲಯಗಳಲ್ಲಿ ಕೆಲಸದ ಹೊರೆ ಬಹುಮುಖವಾಗಿ ಹೆಚ್ಚಾಗಿದ್ದು, ಬೆಂಗಳೂರು ನಗರದಲ್ಲಿ 30 ಪಟ್ಟು ಹೆಚ್ಚಾಗಿದ್ದರೆ, ರಾಜ್ಯದ ಇತರ ನ್ಯಾಯಾಲಯಗಳಲ್ಲಿ 10 ಪಟ್ಟು ಹೆಚ್ಚಳವಾಗಿರುತ್ತದೆ. ಈ ಹಿನ್ನಲೆಯಲ್ಲಿ ಕಳೆದ 35 ವರ್ಷಗಳಲ್ಲಿ ನ್ಯಾಯಾಲಯಗಳಲ್ಲಿ ಏರಿಕೆಯಾದ ಕೆಲಸದ ಹೊರೆ, ಹೆಚ್ಚಾಗಿರುವ ನ್ಯಾಯಾಲಯಗಳ ಸಂಖ್ಯೆ ಇವುಗಳ ಆಧಾರದ ಮೇರೆಗೆ ಸಿಬ್ಬಂದಿ ಪದ್ಧತಿಯನ್ನು (staffing pattern) ಪುನರ್‌ರಚಿಸಬೇಕೆಂಬುದು ಕರ್ನಾಟಕ ರಾಜ್ಯ ನ್ಯಾಯಾಂಗ ಇಲಾಖೆಯ ಮತ್ತು ಸದರಿ ಇಲಾಖೆಯ ನೌಕರರ ಸಂಘದ ಕೋರಿಕೆಯಾಗಿರುತ್ತದೆ.

ಈ ಉದ್ದೇಶಕ್ಕಾಗಿ ರಚಿತವಾದ ಕರ್ನಾಟಕ ಉಚ್ಚ ನ್ಯಾಯಲಯದ ಐವರು ನ್ಯಾಯಧೀಶರ ಸಮಿತಿಯು ಎಲ್ಲಾ ಅಂಶಗಳನ್ನು ಪರಿಗಣಿಸಿ ಹುದ್ದೆಗಳನ್ನು ಸೃಜಿಸಲು ಶಿಫಾರಸ್ಸು ಮಾಡಿದ್ದು, ಉಚ್ಚ ನ್ಯಾಯಾಲಯದ ಪೂರ್ಣಪೀಠವು ಈ ವಿಷಯವನ್ನು ಚರ್ಚಿಸಿ, ಈ ಶಿಫಾರಸ್ಸನ್ನು ಅನುಮೋದಿಸಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರು ದಿನಾಂಕ 21–10–1997ರ ಪತ್ರದಲ್ಲಿ ಹೆಚ್ಚಾದ ಕೆಲಸದ ಪ್ರಮಾಣಕ್ಕೆ ತಕ್ಕಂತೆ ವಿವಿಧ ವೃಂದದ 4,376 ಹುದ್ದೆಗಳನ್ನು ಸೃಜಿಸುವಂತೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರಿ ಆದೇಶದಲ್ಲಿ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಈ ಕೆಳಗಿನಂತೆ ಸದಸ್ಯರನ್ನು ಒಳಗೊಂಡ ಒಂದು ಉನ್ನತ ಮಟ್ಟದ ಸಮಿತಿಯನ್ನು ರಚಿಸಲಾಯಿತು:

1) ಪ್ರಧಾನ ಕಾರ್ಯದರ್ಶಿಯವರು, ಸಿ & ಆಸು ಇಲಾಖೆ (ಆಡಳಿತ ಸುಧಾರಣೆ)
2) ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ.
3) ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ.
4) ಸರ್ಕಾರದ ಕಾರ್ಯದರ್ಶಿಗಳು, ಕಾನೂನು ಇಲಾಖೆ.

ಈ ಉನ್ನತ ಮಟ್ಟದ ಸಮಿತಿಯು ಸದರಿ ವಿಷಯದಲ್ಲಿ ಆಳವಾದ ಅಧ್ಯಯನದ ಅಗತ್ಯತೆಯನ್ನು ಮನಗಂಡು ಈ ಕೆಳಗಿನ ಅಧಿಕಾರಿಗಳನ್ನೊಳಗೊಂಡ ಉಪಸಮಿತಿಯೊಂದನ್ನು ರಚಿಸಿತು.

1) ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ.
2) ಜಂಟಿ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ.
3) ಉಪ ಕಾರ್ಯದರ್ಶಿಗಳು, ಕಾನೂನು ಇಲಾಖೆ.
4) ಉಪ ಕಾರ್ಯದರ್ಶಿಗಳು, ಸಿ & ಆಸು ಇಲಾಖೆ (ಆಡಳಿತ ಸುಧಾರಣೆ)

ಸದರಿ ವಿಷಯವನ್ನು ಉಪ ಸಮಿತಿಯು ಕೂಲಂಕಷವಾಗಿ ಪರಿಶೀಲಿಸಿ, 1972ರಲ್ಲಿ ನ್ಯಾಯಾಲಯಗಳಲ್ಲಿ 1,69,503ರಷ್ಟು ಇದ್ದ ಬಾಕಿ ಪ್ರಮಾಣವು 1995ರ ವೇಳೆಗೆ 12,51,528ರಷ್ಟಾಗಿದೆಯೆಂದು, 1972ರಲ್ಲಿ ಕೇವಲ 201 ನ್ಯಾಯಾಲಯಗಳಿದ್ದು, ಸದರಿ ಪ್ರಸ್ತಾವನೆಯನ್ನು ಸಲ್ಲಿಸುವ ವೇಳೆಗೆ ಅವುಗಳ ಸಂಖ್ಯೆ 459 ಗಳಾಗಿರುವುದನ್ನು ಗಣನೆಗೆ ತೆಗೆದುಕೊಂಡಿದೆ. ಅತ್ಯಲ್ಪ ಸಿಬ್ಬಂದಿಯೊಂದಿಗೆ ಕಾಲಕಾಲಕ್ಕೆ ಹೆಚ್ಚುವರಿ ನ್ಯಾಯಾಲಯಗಳು ಸ್ಥಾಪನೆಯಾಗಿದ್ದು, ಅಧೀನ ನ್ಯಾಯಾಲಯಗಳಲ್ಲಿ ಸಾಕಷ್ಟು ರಚನಾತ್ಮಕ ಬದಲಾವಣೆಗಳಾಗಿವೆ. ಅಂದರೆ, ಬೆಂಗಳೂರಿನಲ್ಲಿ ನಗರ ಸಿವಿಲ್ ನ್ಯಾಯಾಲಯ, ಕೌಟುಂಬಿಕ ನ್ಯಾಯಾಲಯ, ಔದ್ಯಮಿಕ ನ್ಯಾಯಾಧೀಕರಣ ಹಾಗೂ ಕಾರ್ಮಿಕ ನ್ಯಾಯಾಲಯಗಳ ಮತ್ತು ಸಣ್ಣ ವ್ಯಾಜ್ಯಗಳ ನ್ಯಾಯಾಲಯಗಳ ಸ್ಥಾಪನೆ, ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರ ಮೇಲಿನ ದೌರ್ಜನ್ಯ ಪ್ರಕರಣಗಳ ವಿಚಾರಣೆಗಳ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿ.ವಿ) ಮತ್ತು ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ನ್ಯಾಯಾಲಯಗಳ ಸ್ಥಾಪನೆ, ಮೋಟಾರು ವಾಹನ ಪ್ರಕರಣಗಳ ವಿಚಾರಣೆಗಾಗಿ ಹೆಚ್ಚುವರಿ ನ್ಯಾಯಾಲಯಗಳು ಹಾಗೂ ಶೀಘ್ರಗತಿ ನ್ಯಾಯಾಲಯಗಳನ್ನು ಸ್ಥಾಪಿಸಲಾಗಿದೆ. ಅಲ್ಲದೆ ವಿಶೇಷವಾಗಿ ನೆಗೋಷಿಯಬಲ್ ಇನ್ಸ್ಟ್ರುಮೆಂಟ್ ಆಕ್ಟ್‌ಗೆ ಸಂಬಂಧಿಸಿದ ಪ್ರಕರಣಗಳನ್ನು ನಿರ್ವಹಿಸುವ ನ್ಯಾಯಾಲಯಗಳನ್ನು ಸ್ಥಾಪಿಸಲಾಗಿದೆ. ವ್ಯಾಜ್ಯಗಳನ್ನು ನಿರ್ಣಯಿಸುವಲ್ಲಿ ಧೀರ್ಘವಾದ ಕಾರ್ಯವಿಧಾನವನ್ನು ಅನುಸರಿಸಬೇಕಾಗುತ್ತದೆ. ಉದಾ: ವ್ಯಾಜ್ಯಗಳಿಗೆ ಸಂಬಂಧಿಸಿದ ಆಪಾದನೆಯ ದಾಖಲೆಗಳನ್ನು ಸ್ವೀಕರಿಸುವುದು, ಅರ್ಜಿಗಳು, ಖಾಸಗಿ ದೂರುಗಳ ದೂರು ಪಟ್ಟಿ, ದಾಖಲೆ ಪ್ರಕರಣಗಳಲ್ಲಿ ದಾಖಲಿಸುವ, ಆದೇಶ ಪ್ರತಿಗಳನ್ನು ಹಾಗೂ ರಿಜಿಸ್ಟರ್‌ಗಳನ್ನು ವಿವಾದ ಬಗೆಹರಿಯುವವರೆಗೆ ಹಾಗೂ ಆನಂತರದಲ್ಲಿ ಮೇಲ್ಮನವಿ ಸಲ್ಲಿಸುವವರೆಗೆ ನಿರ್ವಹಿಸಬೇಕಾಗುತ್ತದೆ. ಆದ್ದರಿಂದ ವ್ಯಾಜ್ಯಗಳು ಪ್ರಾರಂಭವಾಗಿ ನಿರ್ಣಯವಾಗುವವರೆಗೆ ಪ್ರತಿ ನ್ಯಾಯಲಯದಲ್ಲಿಯೂ ಸಾಕಷ್ಟು ಪ್ರಮಾಣ ಸಿಬ್ಬಂದಿ ಬೇಕಾಗುತ್ತದೆಂದು, ದಾವೆಗಳು ದಾಖಲಾಗುವ ಪ್ರಮಾಣವು ಕ್ರಮೇಣವಾಗಿ ಏರಿಕೆಯಾಗುತ್ತಿರುವುದರಿಂದ ಸಿಬ್ಬಂದಿಯ ಮೇಲೆ ಅಧಿಕ ಕೆಲಸದ ಹೊರೆ ಉಂಟಾಗುತ್ತಿದೆಯೆಂದು ಸಮಿತಿಯು ಅಭಿಪ್ರಾಯ ಪಡುತ್ತಾ, 1997ರಲ್ಲಿ ಇದ್ದ ನ್ಯಾಯಾಲಯಗಳಿಗೆ ಅನುಗುಣವಾಗಿ ಹುದ್ದೆಗಳನ್ನು ಸೃಜಿಸಲಾಗಿತ್ತು. ಆನಂತರದ ಅವಧಿಯಲ್ಲಿ ಸಾಕಷ್ಟು ನ್ಯಾಯಾಲಯಗಳು

ಸ್ಥಾಪನೆಯಾಗಿರುವುದರಿಂದ ಪ್ರಮಾಣಕ್ಕೆ ತಕ್ಕಂತೆ ಹುದ್ದೆಗಳನ್ನು ಸೃಜಿಸಬೇಕಾದ ಅಗತ್ಯತೆಯನ್ನು ತಿಳಿಸಿರುತ್ತದೆ. ಅಲ್ಲದೆ, ವೈಚಾರಿಕ ನೆಲೆಯಲ್ಲಿ ಕಾರ್ಯತತ್ಪರತೆಯನ್ನು ಹಾಗೂ ದಕ್ಷತೆಯನ್ನು ತರುವ ಸಲುವಾಗಿ ಅಧೀನ ನ್ಯಾಯಾಲಯಗಳ ಕೆಲವು ಹುದ್ದೆಗಳನ್ನು ಉನ್ನತೀಕರಿಸಲು ಸಲಹೆ ನೀಡಿರುತ್ತದೆ.

ಉಪ ಸಮಿತಿಯ ಶಿಫಾರಸ್ಸುಗಳನ್ನು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯ್ಲಲಿ ಉನ್ನತ ಮಟ್ಟದ ಸಮಿತಿಯು ದಿನಾಂಕ 17–7–2007ರಂದು ಸಭೆ ಸೇರಿ ಉಪ ಸಮಿತಿಯ ಶಿಫಾರಸ್ಸನ್ನು ಒಪ್ಪಿಕೊಂಡು, ಕೆಲವು ಹುದ್ದೆಗಳನ್ನು ಉನ್ನತೀಕರಿಸುವ/ ಸೃಜಿಸಲು ವಾರ್ಷಿಕ 25.00 ಕೋಟಿಗಳಷ್ಟು ಅಂದಾಜು ಆರ್ಥಿಕ ವೆಚ್ಚ ಬರಬಹುದಾದ ಸದರಿ ಪ್ರಸ್ತಾವನೆಗೆ ಒಪ್ಪಿಗೆ ಸೂಚಿಸಿರುತ್ತದೆ.

ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 137 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 25ನೇ ಮಾರ್ಚ್ 2008.**

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಪ್ರಸ್ತಾವನೆಯನ್ವಯ ಈ ಆದೇಶದ ಅನುಬಂಧದಲ್ಲಿ ವಿವರಿಸಿರುವಂತೆ ವಿವಿಧ ಶ್ರೇಣಿಗಳ 779 ಹುದ್ದೆಗಳನ್ನು ಉನ್ನತೀಕರಿಸಲು ಮತ್ತು ವಿವಿಧ ಶ್ರೇಣಿಗಳ ಒಟ್ಟು 4334 ಹುದ್ದೆಗಳನ್ನು ಸೃಜಿಸಲು ಸರ್ಕಾರವು ಈ ಮೂಲಕ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ತಾತ್ವಿಕವಾಗಿ ಅನುಮೋದನೆ ನೀಡಿದೆ.

**ಷರತ್ತುಗಳು:**

ಅ) ಈ ಆದೇಶದ ಅನುಬಂಧದಲ್ಲಿ ತಿಳಿಸಿರುವಂತೆ ವಿವಿಧ ಶ್ರೇಣಿಯ ಒಟ್ಟು 779 ಹುದ್ದೆಗಳನ್ನು ಉನ್ನತೀಕರಿಸತಕ್ಕದ್ದು.

ಆ) ಸೃಜಿಸಲಾಗಿರುವ 4334 ಹುದ್ದೆಗಳನ್ನು ಹಂತಹಂತವಾಗಿ ತುಂಬಿಕೊಳ್ಳಲು ಅಂದರೆ ಒಂದು ಮತ್ತು ಎರಡನೇ ವರ್ಷಗಳಲ್ಲಿ (2008–09 ಮತ್ತು 2009–10) ಪ್ರತಿ ವರ್ಷ 1/5ರಷ್ಟು ಹುದ್ದೆಗಳನ್ನು ಮಾತ್ರ ತುಂಬತಕ್ಕದ್ದು. ನಂತರದಲ್ಲಿ ನ್ಯಾಯಾಂಗ ಇಲಾಖೆಯ ವಿವಿಧ ನ್ಯಾಯಲಯಗಳಲ್ಲಿನ ಕಾರ್ಯವೈಖರಿಗೆ ಅನುಗುಣವಾಗಿ ಅಲ್ಲಿನ ಕಾರ್ಯ ಪ್ರಕ್ರಿಯೆ ಮತ್ತು ಪ್ರಕರಣಗಳ ವಿಲೇವಾರಿಯ ಹಿನ್ನೆಲೆಯಲ್ಲಿ ಆಧುನೀಕರಣದ ಮರು ವಿನ್ಯಾಸ ಪ್ರಕ್ರಿಯೆ ಆಧಾರದ ಮೇಲೆ ವಾಸ್ತವವಾಗಿ ಅಗತ್ಯವಿರುವ ಹುದ್ದೆಗಳ ಪ್ರಮಾಣವನ್ನು ನಿರ್ಣಯಿಸಲು ನ್ಯಾಷನಲ್ ಪ್ರಾಡಕ್ಟವಿಟಿ ಕೌನ್ಸಿಲ್‌ನಿಂದ ಒಂದು ಸಮಗ್ರ ಅಧ್ಯಯನವನ್ನು ನಡೆಸತಕ್ಕದ್ದು. ಈ ಅಧ್ಯಯನದಿಂದ ಈಗ ಪ್ರಸ್ತಾಪಿಸಿರುವಷ್ಟೇ ಹುದ್ದೆಗಳ ಅಗತ್ಯವಿದೆಯೆಂದು ಕಂಡು ಬಂದಲ್ಲಿ, ಉಳಿದ 3/5ರಷ್ಟು ಹುದ್ದೆಗಳನ್ನು 3, 4 ಮತ್ತು 5ನೇ ವರ್ಷಗಳಲ್ಲಿ (2010–11, 2011–12 ಮತ್ತು 2012–13) ತುಂಬಲು ಮುಂದಿನ ಕ್ರಮ ಕೈಗೊಳ್ಳತಕ್ಕದ್ದು. ಒಂದು ವೇಳೆ ಸದರಿ ಅಧ್ಯಯನದಿಂದ ಹುದ್ದೆಗಳ ಪ್ರಮಾಣದಲ್ಲಿ ವ್ಯತ್ಯಯ ಕಂಡುಬಂದಲ್ಲಿ ಇಡೀ ಪ್ರಸ್ತಾವನೆಯನ್ನು ಸಮಗ್ರವಾಗಿ ಮರುಪರಿಶೀಲಿಸಿ ಮುಂದಿನ ಸೂಕ್ತ ಕ್ರಮ ಕೈಗೊಳ್ಳತಕ್ಕದ್ದು.

ಇ) ಈ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರದ ಅವಧಿಯಲ್ಲಿ ಈ ಪ್ರಸ್ತಾವನೆಯಲ್ಲಿ ಒಳಗೊಂಡಿರುವ ಯಾವುದೇ ಹುದ್ದೆಗಳಿಗೆ ಸಂಬಂಧಪಟ್ಟಂತೆ ಉನ್ನತೀಕರಣ/ಸೃಜನೆಗೆ ಪ್ರತ್ಯೇಕ ಪ್ರಸ್ತಾವನೆಗಳನ್ನು ಸಲ್ಲಿಸಿ ಮಂಜೂರಾತಿ ಪಡೆದುಕೊಂಡಿದ್ದಲ್ಲಿ, ಅಂತಹ ಹುದ್ದೆಗಳನ್ನು ಹೊರತುಪಡಿಸಿ, ಉಳಿದಂತೆ ಹುದ್ದೆಗಳ ಉನ್ನತೀಕರಣ/ಸೃಜನೆಗೆ ಸೂಕ್ತ ಕ್ರಮ ಕೈಗೊಳ್ಳತಕ್ಕದ್ದು.

ಈ) ಅನುಬಂಧದ ಕ್ರಮ ಸಂಖ್ಯೆ 16ರಲ್ಲಿನ ಗ್ರೂಪ್–ಡಿ ಹುದ್ದೆಗಳಲ್ಲಿ (e)ನಿಂದ (h)ವರೆಗಿನ ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ (outsource) ತುಂಬತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 69 ವೆಚ್ಚ–7/2008, ದಿನಾಂಕ 19–2–2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಲಾ 137 ಎಲ್‌ಎಸಿ 2005, ದಿನಾಂಕ 25–3–2008ರ 'ಅನುಬಂಧ'**

| Sl. No. | Name of the Post | Existed Number of Posts as on 1995 | Number of Posts proposed for upgradation | Number of Posts proposed for Creation |
|---|---|---|---|---|
| 1 | Chief Administrative Officer | 36 | 36 (Only in Pay Scale) | 02 |
| 2 | Accounts Officer | 01 | - | 01 |

| 1 | 2 | 3 | 4 | 5 |
|---|---|---|---|---|
| 3 | Administrative Officer | - | 109 (From Sheristedar Admn.) | - |
| 4 | Sheristedar | 507 (616-109) | - | 433 |
| 5 | Protocol Officer | -1 | - | 19 |
| 6 | Senior Judgment Writer | - | 60 (From Judgment Writers) | 17 |
| 7 | Judgment Writer | - (60-60) | 116 (From Stenographers) | - |
| 8 | Stenographer | 431 512-116-3+38) | - | 21 |
| 9 | Bench Assistant | - | 458 (From FDA) | - |
| 10 | First Division Assistant | 807 (1265-458) | - | 1822 |
| 11 | Second Division Assistant | 2092 | - | 1014 |
| 12 | Senior. Typist | 126 | - | - |
| 13 | Typist & Typist-Copyist | 1377 | - | 139 |
| 14 | Bailiff | 542 | - | 257 |
| 15 | Process Server | 1373 | - | 225 |
| 16 | Group-D Officials | 2418 | - | 377 |
| | a) Attenders | 855 | - | 272 |
| | b) Peons | 1497 | - | 65 |
| | c) Drivers | 44 | - | 02 |
| | d) Cycle Orderly | 01 | - | - (To be outsourced through Manpower Agency) |
| | e) Cleaners | 08 | - | 07 |
| | f) Scavengers | 07 | - | 23 |
| | g) Gardeners | - | - | 04 |
| | h) Lift Attenders | 06 | - | 04 |
| 17 | Typewriter Mechanic | - | - | 03 |
| 18 | Telephone Operator | - | - | 04 |
| | **Total** | **9711** | **779** | **4334** |

P.R. 617

**E. SHIVANANDA**
Under Secretary to Government
Law, Justice and Human Rights Department

**ಒಳಾಡಳಿತ ಸಚಿವಾಲಯ**

**ಸಂಖ್ಯೆ: ಒಇ 15 ಪೊಸಿಲಿ 2007, ಬೆಂಗಳೂರು, ದಿನಾಂಕ 9ನೇ ಮೇ 2008**

**ತಿದ್ದುಪಡಿ**

ಸರ್ಕಾರದ ಆದೇಶ ಸಂಖ್ಯೆ: ಒಇ 15 ಪೊಸಿಲಿ 2007, ದಿನಾಂಕ 14–1–2008ರ ಪ್ರಸ್ತಾವನೆ ಹಾಗೂ ಆದೇಶ ಭಾಗದಲ್ಲಿ "ಶ್ರೀ ಹೆಚ್.ಎಸ್. ಚಂದ್ರಪ್ಪ" ಎಂಬುದನ್ನು ಹಾಗೂ ದಿನಾಂಕ 25–2–2008ರ ತಿದ್ದುಪಡಿಯಲ್ಲಿ "ಶ್ರೀ ಎಸ್.ಎನ್. ಚಂದ್ರಪ್ಪ" ಎಂಬುದನ್ನು "ಶ್ರೀ ಹೆಚ್.ಎನ್. ಚಂದ್ರಪ್ಪ" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 805

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** 2008–09ನೇ ಸಾಲಿಗೆ ಎಸ್‌ಜಿಎಸ್‌ವೈ ಮೊದಲನೇ ಕಂತಿನ ರಾಜ್ಯದ ಪಾಲಿನ ಭಾಗಶಃ ಅನುದಾನವನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022:1:2008 ಎಸ್‌ಜಿಎಸ್‌ವೈ–I(12) ದಿನಾಂಕ 2–4–2008.

**ಪ್ರಸ್ತಾವನೆ :**

ಕೇಂದ್ರ ಸರ್ಕಾರವು ಓದಲಾಗಿದೆ (1)ರಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) 2008–09ನೇ ಸಾಲಿನ (ಒಟ್ಟು ಹಂಚಿಕೆಯ 1/6ನೇ ಭಾಗ) ಒಂದನೇ ಕಂತಿನ ಭಾಗಶಃ ಅನುದಾನ ರೂ. 13,36,17,000 ಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಮೊದಲನೇ ಕಂತಿನ ಅನುದಾನ ರೂ. 4,45,39,000 ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 32 ಎಸ್‌ಜೆವೈ 2008, ಬೆಂಗಳೂರು, ದಿನಾಂಕ: 12ನೇ ಮೇ 2008.**

ರಾಜ್ಯ ಸರ್ಕಾರವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಮೊದಲನೇ ಕಂತಿನ ಭಾಗಶಃ ಅನುದಾನ ರೂ. 4,45,39,000ಗಳನ್ನು (ರೂ. ನಾಲ್ಕು ಕೋಟಿ ನಲವತ್ತೈದು ಲಕ್ಷ ಮೂವತ್ತೊಂಭತ್ತು ಸಾವಿರ ಮಾತ್ರ) ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವಂತೆ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದ ನಡುವೆ 75 : 25 ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕಶೀರ್ಷಿಕೆ 2501 – ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು – 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು –198– ಗ್ರಾಮ ಪಂಚಾಯತ್‌ಗಳಿಗೆ ಸಹಾಯ –6– ಗ್ರಾಮ ಪಂಚಾಯತ್‌ಗಳು –01– ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2008–09 (2501–01–198–6–01) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003, ದಿನಾಂಕ 14–7–2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 14 ಎಸ್‌ಜೆವೈ 2007 ದಿನಾಂಕ 18–4–2007ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2008–09ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ onlineಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಪಿಪಿಎಂಯು) ಹಾಗೂ ಪ.ನಿ. ಸರ್ಕಾರದ ಅಪರ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 213 ಪಿಬಿಎಸ್ 2008, ದಿನಾಂಕ 7–5–2008ರಂತೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಂ. ಶಿರೋಳ್**

ನಿರ್ದೇಶಕರು (ಪಿಪಿಎಂಯು) ಹಾಗೂ

ಪ.ನಿ. ಸರ್ಕಾರದ ಅಪರ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಅನುಬಂಧ

ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 32 ಎಸ್‌ಜಿವೈ 2008, ಬೆಂಗಳೂರು ದಿನಾಂಕ 12-5-2008

(ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾದ ಮೊದಲನೇ ಕಂತಿನ ಅನುದಾನ |
|---|---|---|---|---|---|
| 1 | ಬಾಗಲಕೋಟೆ | 461 | 2900zz0001 | 3154000 | 1051000 |
| 2 | ಬೆಂಗಳೂರು (ಗ್ರಾ) | 402 | 0300zz8001 | 4856000 | 809000 |
| 3 | ಬೆಂಗಳೂರು ನಗರ | 401 | 0100zz8001 | 1343000 | 448000 |
| 4 | ಬೆಳಗಾಂ | 413 | 2200zz0002 | 9322000 | 3107000 |
| 5 | ಬಳ್ಳಾರಿ | 418 | 3400zz0001 | 7406000 | 2469000 |
| 6 | ಬೀದರ್ | 419 | 3800zz5701 | 5249000 | 1750000 |
| 7 | ಬಿಜಾಪುರ | 414 | 2800zz9152 | 6179000 | 2060000 |
| 8 | ಚಾಮರಾಜನಗರ | 456 | 1000zz0001 | 6540000 | 2180000 |
| 9 | ಚಿಕ್ಕಮಗಳೂರು | 408 | 1800zz0017 | 2970000 | 990000 |
| 10 | ಚಿಕ್ಕಬಳ್ಳಾಪುರ | 453 | 0600zz0001 | * | 1219000 |
| 11 | ಚಿತ್ರದುರ್ಗ | 403 | 1600zz0001 | 5276000 | 1759000 |
| 12 | ದಕ್ಷಿಣ ಕನ್ನಡ | 409 | 1900zz0047 | 2868000 | 956000 |
| 13 | ದಾವಣಗೆರೆ | 451 | 1700zz0002 | 4258000 | 1419000 |
| 14 | ಧಾರವಾಡ | 415 | 2500zz8798 | 2656000 | 885000 |
| 15 | ಗದಗ್ | 462 | 2600zz0001 | 4216000 | 1405000 |
| 16 | ಗುಲ್ಬರ್ಗಾ | 417 | 3200zz0003 | 7679000 | 2560000 |
| 17 | ಹಾಸನ | 410 | 1300zz0003 | 3849000 | 1283000 |
| 18 | ಹಾವೇರಿ | 463 | 2700zz0001 | 4604000 | 1535000 |
| 19 | ಕೊಡಗು | 411 | 1200zz0001 | 1082000 | 361000 |
| 20 | ಕೋಲಾರ | 404 | 0700zz8002 | 7317000* | 1219000 |
| 21 | ಕೊಪ್ಪಳ | 466 | 1500zz0010 | 6624000 | 2208000 |
| 22 | ಮಂಡ್ಯ | 412 | 1100zz0001 | 5010000 | 1670000 |
| 23 | ಮೈಸೂರು | 407 | 0900zz0001 | 6107000 | 2036000 |
| 24 | ರಾಯಚೂರು | 420 | 3600zz0001 | 6238000 | 2079000 |
| 25 | ರಾಮನಗರ | 452 | 0308zz0001 | * | 809000 |
| 26 | ಶಿವಮೊಗ್ಗ | 45 | 1400zz0002 | 5306000 | 1769000 |
| 27 | ತುಮಕೂರು | 406 | 0800zz0001 | 7865000 | 2622000 |
| 28 | ಉಡುಪಿ | 457 | 2000zz0001 | 2335000 | 778000 |
| 29 | ಉತ್ತರ ಕನ್ನಡ | 416 | 3000zz0080 | 3308000 | 1103000 |
| | | | ಒಟ್ಟು | **133617000** | **44539000** |

* ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್‌ಗೆ ಬಂದಿರುವ ಕೇಂದ್ರದ ಪಾಲಿನ ಅನುದಾನ ರೂ. 48.56 ಲಕ್ಷದ ಪೈಕಿ ಶೇಕಡಾ 50ರಷ್ಟು ಅಂದರೆ ರೂ. 24.28 ಲಕ್ಷವನ್ನು ರಾಮನಗರ ಜಿಲ್ಲಾ ಪಂಚಾಯತಿಗೆ ಹಾಗೂ ಕೋಲಾರ ಜಿಲ್ಲಾ ಪಂಚಾಯತ್‌ಗೆ ಬಂದಿರುವ ಕೇಂದ್ರದ ಪಾಲಿನ ಅನುದಾನ ರೂ. 73.17 ಲಕ್ಷದ ಪೈಕಿ ರೂ. 36.58 ಲಕ್ಷವನ್ನು ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತಿಗೆ ಚೆಕ್ ಮೂಲಕ ನೀಡಲು ಸೂಚಿಸಿದೆ.

**ಸಿ.ಎಂ. ಶಿರೋಳ್**

ಪಿ.ಆರ್. 804

ನಿರ್ದೇಶಕರು (ಪಿಪಿಎಂಯು) ಹಾಗೂ

ಪ.ನಿ. ಸರ್ಕಾರದ ಅಪರ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ :** ಮಂಡ್ಯ ನಗರಸಭೆಯಲ್ಲಿ 2006–07ನೇ ಸಾಲಿನ ಎಸ್.ಎಫ್.ಸಿ. ಅನುದಾನದಡಿ ಅಭಿವೃದ್ಧಿ ಕೆಲಸಗಳನ್ನು ಅನುಷ್ಠಾನಗೊಳಿಸಲು ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ ಆದೇಶ.

**ಓದಲಾಗಿದೆ :** 1) ದಿನಾಂಕ 29–3–2007, ಸಂಖ್ಯೆ: ನಅಇ 27 ಎಸ್ಎಫ್ಸಿ 2007(3)ರ ಸರ್ಕಾರದ ಆದೇಶ.

2) ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಪೌನಿ/ತಾಂತ್ರಿಕ/ಮಂಡ್ಯನಸ/19/2007–08, ದಿನಾಂಕ 23–4–2007.

3) ದಿನಾಂಕ 5–6–2007, ಸಂಖ್ಯೆ: ನಅಇ 23 ಎಸ್.ಎಫ್.ಸಿ. 2007ರ ಸರ್ಕಾರದ ಆದೇಶ.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಆದೇಶದಲ್ಲಿ ಮಂಡ್ಯ ನಗರ ಸಭೆಯ ವ್ಯಾಪ್ತಿಯಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಪೂರಕ ಅಂದಾಜುಗಳು 2006–07 (2ನೇ ಕಂತು) ರಲ್ಲಿನ ಎಸ್.ಎಫ್.ಸಿ. ಅನುದಾನದ ಅಡಿಯಲ್ಲಿ ರೂ. 10.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಸದರಿ ಆದೇಶವನ್ನಾಧರಿಸಿ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಪೌರಾಡಳಿತ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಮಂಡ್ಯ ನಗರಸಭೆಯ ವ್ಯಾಪ್ತಿಯಲ್ಲಿ ವಿವಿಧ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳುವ ಸಂಬಂಧವಾಗಿ ರೂ. 8.60 ಕೋಟಿಗಳ ಅಂದಾಜು ಮೊತ್ತದಲ್ಲಿ 131 ಸಿವಿಲ್ ಕಾಮಗಾರಿಗಳನ್ನು ಹಾಗೂ 1.40 ಕೋಟಿಗಳ ಅಂದಾಜು ಮೊತ್ತದಲ್ಲಿ ಬೀದಿ ದೀಪಗಳ 23 ಕಾಮಗಾರಿಗಳನ್ನು ಆಯ್ಕೆ ಮಾಡಿ ಒಟ್ಟಿಗೆ 154 ಕಾಮಗಾರಿಗಳನ್ನು 14 ಪ್ಯಾಕೇಜ್‌ಗಳಾಗಿ ಪರಿಗಣಿಸಿ ಅಲ್ಪಾವಧಿ ಟೆಂಡರ್ ಮೂಲಕ ನಿರ್ವಹಿಸಲು ಅನುಮತಿ ನೀಡುವಂತೆ ಮಂಡ್ಯ ಜಿಲ್ಲೆಯ ಜಿಲ್ಲಾಧಿಕಾರಿಗಳು ಕೋರಿರುತ್ತಾರೆಂದು ತಿಳಿಸುತ್ತಾ ಸದರಿ ಪ್ರಸ್ತಾವನೆಯ ಕ್ರಿಯಾ ಯೋಜನಾ ವರದಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿ ಪ್ರತಿಯೊಂದು ಕಾಮಗಾರಿಯ ಅಂದಾಜುಗಳನ್ನೊಳಗೊಂಡ ವಿವರವಾದ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆದರೆ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ ಮಂಡ್ಯ ನಗರಸಭೆಗೆ ಬಿಡುಗಡೆ ಮಾಡಲಾಗಿದ್ದ ರೂ. 10.00 ಕೋಟಿಗಳನ್ನು ರೂ. 527.90 ಲಕ್ಷಗಳಿಗೆ ಸೀಮಿತಗೊಳಿಸಿ ನಿಗದಿಗೊಳಿಸಲಾಗಿದೆ. ಮುಂದುವರೆದು ಈ ಬಗ್ಗೆ ಜಂಟಿ ನಿರ್ದೇಶಕರು (ಯೋಜನೆ), ನಗರಾಭಿವೃದ್ಧಿ ಇಲಾಖೆ ಇವರ ಅಭಿಪ್ರಾಯ ಕೋರಲಾಗಿ, ಜಂಟಿ ನಿರ್ದೇಶಕರವರು ಆರ್ಥಿಕ ಇಲಾಖೆಯ ನಿರ್ದೇಶನದಂತೆ ರೂ. 527.90 ಲಕ್ಷಗಳ ಅನುದಾನವನ್ನು ರೂ. 325.00 ಲಕ್ಷಕ್ಕೆ ಸೀಮಿತಗೊಳಿಸಿರುವುದರಿಂದ, ರೂ. 325.00 ಲಕ್ಷಗಳ ಕ್ರಿಯಾ ಯೋಜನೆಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಬೇಕೆಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 02 ಟಿಎಂಎಸ್ 2007, ಬೆಂಗಳೂರು, ದಿನಾಂಕ: 25ನೇ ಜನವರಿ 2008**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಮಂಡ್ಯ ನಗರಸಭೆಯ ವ್ಯಾಪ್ತಿಯಲ್ಲಿನ ಒಟ್ಟು 154 ಕಾಮಗಾರಿಗಳನ್ನು 14 ಪ್ಯಾಕೇಜ್‌ಗಳಾಗಿ ಪರಿಗಣಿಸಿ, ಅಲ್ಪಾವಧಿ ಟೆಂಡರ್ ಮೂಲಕ ನಿರ್ವಹಿಸಲು, ಒಟ್ಟು ರೂ. 325.00 ಲಕ್ಷಗಳ (ಮುನ್ನೂರ ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಕ್ರಿಯಾ ಯೋಜನೆಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಿದೆ.

ಈ ವೆಚ್ಚವನ್ನು ಮಂಡ್ಯ ನಗರಸಭೆಗೆ ಎಸ್.ಎಫ್.ಸಿ. ಅನುದಾನದಲ್ಲಿ ಬಿಡುಗಡೆಯಾಗಿರುವ ಮೊತ್ತದಿಂದ ಭರಿಸತಕ್ಕದ್ದು ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳ ಪಾರದರ್ಶಕ ಅಧಿನಿಯಮ (KTPP Act) 1999 ಅನ್ನು ಕಟ್ಟು ನಿಟ್ಟಾಗಿ ಪಾಲಿಸಿ, ಆದೇಶದಲ್ಲಿ ನಮೂದಿಸಿರುವ ಉದ್ದೇಶಕ್ಕೆ ಮಾತ್ರ ಬಳಸಿ, ಬಳಕೆ ಪ್ರಮಾಣ ಪತ್ರವನ್ನು ತಪ್ಪದೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 192

**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಬ್ರಹ್ಮಾನಂದ ಮುನಿ, ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಸ್ಥಾನಿಕ ಸಹಾಯಕರು (ನಿವೃತ್ತ) ಇವರ ವಿರುದ್ಧದ ಅಧಿಕಾರ ದುರುಪಯೋಗದ ಬಗ್ಗೆ ಇಲಾಖಾ ವಿಚಾರಣೆ ಕುರಿತು – ಅಂತಿಮ ಆದೇಶ.

**ಓದಲಾಗಿದೆ :** 1) ದಿನಾಂಕ 4–2–2000 ಸಂಖ್ಯೆ: ಕಂಇ 71 ಮುಸೇವಿ 1998(ಭಾಗ)ರ ಸರ್ಕಾರಿ ಆದೇಶ.

2) ದಿನಾಂಕ 6–3–2000 ಸಂಖ್ಯೆ: ಸಿಬ್ಬಂದಿ.ಸಿ.ಆರ್.22/98–99ರ ಧಾರ್ಮಿಕ ದತ್ತಿ ಆಯುಕ್ತರ ಅ.ಸ. ಪತ್ರ.

3) ದಿನಾಂಕ 26–4–2003 ಸಂಖ್ಯೆ: ಕಂಇ 61 ಮುಸೇವಿ 2000ರ ಸರ್ಕಾರಿ ಆದೇಶ.
4) ದಿನಾಂಕ 5–8–2003 ಸಂಖ್ಯೆ: ಕಂಇ 61 ಮುಸೇವಿ 2000ರ ತಿಳುವಳಿಕೆ ಪತ್ರ.
5) ದಿನಾಂಕ 22–8–2003 ಮತ್ತು 3–10–2003ರ ಶ್ರೀ ಬ್ರಹ್ಮಾನಂದ ಮುನಿಯವರ ಲಿಖಿತ ಹೇಳಿಕೆ.
6) ದಿನಾಂಕ 5–12–2003 ಸಂಖ್ಯೆ: ಕಂಇ 61 ಮುಸೇವಿ 2000ರ ಸರ್ಕಾರಿ ಆದೇಶ.
7) ದಿನಾಂಕ 28–9–2007ರ ವಿಚಾರಣಾಧಿಕಾರಿಯವರ ಅಂತಿಮ ವರದಿ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಬ್ರಹ್ಮಾನಂದ ಮುನಿ, ಮುಜರಾಯಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ತುಮಕೂರು ಮತ್ತು ಬೆಂಗಳೂರು ನಗರಸಭಾ ವಲಯದ ಮುಜರಾಯಿ ಸಹಾಯಕ ಆಯುಕ್ತರು, ಪ್ರಸ್ತುತ ಗ್ರೂಪ್ –ಎ ಕಿರಿಯ ಶ್ರೇಣಿ ಅಧಿಕಾರಿ, ಕೇಂದ್ರ ಸ್ಥಾನಿಕ ಸಹಾಯಕರು (ನಿವೃತ್ತ) ಇವರ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತಗೊಳಿಸಿ ಆದೇಶಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಧಾರ್ಮಿಕ ದತ್ತಿ ಆಯುಕ್ತರ ಅರೆ ಸರ್ಕಾರಿ ಪತ್ರದಲ್ಲಿ ಶ್ರೀ ಬ್ರಹ್ಮಾನಂದ ಮುನಿ ಮತ್ತು ಸರ್ಕಾರದ ಅಧೀನ ಕಾರ್ಯದರ್ಶಿಗಳಾದ ಶ್ರೀ ಹೋಟ್ಕರ್ ಇವರುಗಳು ಮೇಲಾಧಿಕಾರಿಗಳ ಗಮನಕ್ಕೆ ತರದೇ, ಮೇಲಾಧಿಕಾರಿಗಳ ಅನುಮೋದನೆ ಪಡೆಯದೆ ಕೇಂದ್ರ ಸ್ಥಾನಿಕ ಸಹಾಯಕರು ಮೇಲೆ ಸ್ವಹಿತಕ್ಕಾಗಿ ಧಾರ್ಮಿಕ ದತ್ತಿ ಆಯುಕ್ತರನ್ನು ಮತ್ತು ಸರ್ಕಾರವನ್ನು ತಪ್ಪುದಾರಿಗೆ ಎಳೆದಿರುವ ಆರೋಪದ ಮೇಲೆ ತಕ್ಷಣ ಶಿಸ್ತು ಕ್ರಮ ಜರುಗಿಸಬೇಕೆಂದೂ ಹಾಗೂ ಸರ್ಕಾರದಲ್ಲಿ ಮೇಲಾಧಿಕಾರಿಗಳನ್ನು ತಪ್ಪು ದಾರಿಗೆಳೆದು ಸರ್ಕಾರಿ ಆದೇಶ ಹೊರಡಿಸಲು ಸಫಲರಾಗಿರುವುದು ಸರ್ಕಾರದ ಕಡತದಲ್ಲಿ ಕಂಡು ಬಂದರೆ ಸದರಿಯವರ ಮೇಲೂ ಶಿಸ್ತು ಕ್ರಮ ಕೈಗೊಳ್ಳಬೇಕೆಂದು ಶಿಫಾರಸ್ಸು ಮಾಡಿದ್ದರು.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಬ್ರಹ್ಮಾನಂದ ಮುನಿ, ಧಾರ್ಮಿಕ ದತ್ತಿ ಆಯುಕ್ತರ ನಿವೃತ್ತಿ ಕೇಂದ್ರ ಸ್ಥಾನಿಕ ಸಹಾಯಕರು ಇವರ ವಿರುದ್ಧದ ಅಧಿಕಾರ ದುರುಪಯೋಗದ ಬಗ್ಗೆ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ತಿಳುವಳಿಕೆ ಪತ್ರದಲ್ಲಿ ಶ್ರೀ ಬ್ರಹ್ಮಾನಂದ ಮುನಿ, ನಿವೃತ್ತ, ಗ್ರೂಪ್–ಎ ಅಧಿಕಾರಿ ಹಾಗೂ ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಸ್ಥಾನಿಕ ಸಹಾಯಕರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕಾರಣ ಕೇಳುವ ನೋಟೀಸ್‌ನ್ನು ದೋಷಾರೋಪಣ ಪಟ್ಟಿಗಳೊಂದಿಗೆ ನೀಡಿ, ಈ ತಿಳುವಳಿಕೆ ಪತ್ರ ತಲುಪಿದ 15 ದಿನಗಳೊಳಗಾಗಿ ಅವರು ಪ್ರತಿವಾದದ ಲಿಖಿತ ಹೇಳಿಕೆಯನ್ನು ಸಲ್ಲಿಸಬೇಕೆಂದು ಸೂಚಿಸಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ಶ್ರೀ ಬ್ರಹ್ಮಾನಂದ ಮುನಿ, ನಿವೃತ್ತ ಗ್ರೂಪ್–ಎ ಅಧಿಕಾರಿಯವರ ಲಿಖಿತ ಹೇಳಿಕೆ ಸಲ್ಲಿಸಿ, ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿರುತ್ತಾರೆ. ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಸದರಿಯವರ ಮೇಲಿನ ಆಪಾದನೆಗಳ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ಈ ಆರೋಪಿತರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿ, ಮೇಲೆ (6)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿಯವರ ವಿರುದ್ಧ ಮಾಡಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11ರಡಿಯಲ್ಲಿ ಪ್ರದತ್ತವಾದ ಅಧಿಕಾರದನ್ವಯ ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರಾದ ಶ್ರೀ ಜಿ. ಇಂಧೂದರ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 11(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ವಿಚಾರಣಾಧಿಕಾರಿಗಳು ವಿಧಿವಿಧಾನಗಳಿಗನುಸಾರ ವಿಚಾರಣೆ ಜರುಗಿಸಿ ವಿಚಾರಣಾ ವರದಿಯನ್ನು 3 ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ಆದೇಶಿಸಲಾಗಿತ್ತು.

ಮೇಲೆ (7)ರಲ್ಲಿ ಓದಲಾದ ವಿಚಾರಣಾಧಿಕಾರಿಗಳ ಪತ್ರದಲ್ಲಿ ಶ್ರೀ ಬ್ರಹ್ಮಾನಂದ ಮುನಿ, ನಿವೃತ್ತ ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಸ್ಥಾನಿಕ ಸಹಾಯಕರು, ಇವರ ಮೇಲೆ ಹೊರಿಸಲಾಗಿರುವ ಆಪಾದನೆಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಿ ಪ್ರಕರಣದ ಸಾಕ್ಷಾಧಾರವನ್ನು ಪರಿಗಣಿಸಿ ಆಪಾದಿತರ ಮೇಲಿನ ಅಪಾದನೆಯು ರುಜುವಾತಾಗಿರುವುದಿಲ್ಲವೆಂದು ಅಭಿಪ್ರಾಯಪಟ್ಟು ವಿಚಾರಣಾ ವರದಿಯನ್ನು ಸಲ್ಲಿಸಿದ್ದಾರೆ. ಸರ್ಕಾರವು ವಿಚಾರಣಾಧಿಕಾರಿಗಳ ವರದಿ, ಅವರ ಅಭಿಪ್ರಾಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಬ್ರಹ್ಮಾನಂದ ಮುನಿಯವರ ಮೇಲೆ ಹೊರಿಸಲಾದ ಆರೋಪವು ಸಾಬೀತಾಗಿಲ್ಲದಿರುವುದರಿಂದ ಅವರ ಮೇಲಿನ ಆರೋಪವನ್ನು ಕೈಬಿಟ್ಟು ಅವರನ್ನು ಆರೋಪದಿಂದ ಮುಕ್ತಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 61 ಮುಸೇವಿ 2000, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2008**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಶ್ರೀ ಬ್ರಹ್ಮಾನಂದ ಮುನಿ, ನಿವೃತ್ತ ಗ್ರೂಪ್–ಎ ಅಧಿಕಾರಿ, ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಸ್ಥಾನಿಕ ಸಹಾಯಕರು ಇವರು ತುಮಕೂರು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಮುಜರಾಯಿ

ಸಹಾಯಕರು ಹಾಗೂ ಬೆಂಗಳೂರು ನಗರಸಭಾ ವಲಯದ ಮುಜರಾಯಿ ಸಹಾಯಕ ಆಯುಕ್ತರಾಗಿದ್ದಾಗ ಇವರ ವಿರುದ್ಧ ದಿನಾಂಕ 5–8–2003ರ ತಿಳುವಳಿಕೆ ಪತ್ರ ಸಂಖ್ಯೆ: ಕಂಇ 61 ಮುಸೇವಿ 2000ರಲ್ಲಿ ಹೊರಿಸಲಾಗಿರುವ ಆರೋಪದ ಬಗ್ಗೆ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಪರಿಗಣಿಸಿ ಅವರ ವಿರುದ್ಧದ ಆರೋಪವು ಸಾಬೀತಾಗಿಲ್ಲದಿರುವುದರಿಂದ ಇವರನ್ನು ಸದರಿ ಆರೋಪದಿಂದ ಮುಕ್ತಗೊಳಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 408

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ವತಿಯಿಂದ ಸ್ಥಾಪಿಸಲಾಗಿರುವ ಪರಂಪರೆ ಕೂಟ (ಹೆರಿಟೇಜ್ ಕ್ಲಬ್)ಗಳಿಗೆ ಹೆಚ್ಚಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 186 ಕೆಎಂಯು 2007, ದಿನಾಂಕ 29–10–2007.
2) ಆಯುಕ್ತರು, ಪ್ರಾ.ವ.ಸಂ: ಪರಂಪರೆ ಇಲಾಖೆ ರವರ ಪತ್ರ ಸಂಖ್ಯೆ: ಅಪ್ರಾಸಂಪ:ಹೆ.ಕ್ಲಬ್: 2007–08, ದಿನಾಂಕ 31–1–2008.

**ಪ್ರಸ್ತಾವನೆ :**

ಪಾರಂಪರಿಕ ಕ್ಷೇತ್ರಗಳು ಹಾಗೂ ಸ್ಮಾರಕಗಳ ಬಗ್ಗೆ ಹೆಚ್ಚಿನ ಅರಿವು ಮೂಡಿಸಲು ಪ್ರಾಯೋಗಿಕವಾಗಿ ಜಿಲ್ಲೆಗೆ ಒಂದರಂತೆ 2007–08ನೇ ಸಾಲಿನಲ್ಲಿ 25 ಹೆರಿಟೇಜ್ ಕ್ಲಬ್ಬುಗಳನ್ನು ಸ್ಥಾಪಿಸಲು ಹಾಗೂ ಪ್ರತಿಯೊಂದು ಕ್ಲಬ್ಬಿಗೆ ರೂ. 10000/–ಗಳಂತೆ ವೆಚ್ಚ ಮಾಡಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ. ಮೇಲೆ (2)ರಲ್ಲಿ ಓದಲಾದ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಅವರ ಪ್ರಸ್ತಾವನೆಯಲ್ಲಿ ಹೆರಿಟೇಜ್ ಕ್ಲಬ್ಬುಗಳಿಗೆ ನೀಡಲಾಗಿರುವ ರೂ. 10000/– ಅನುದಾನವು ಕಡಿಮೆ ಇದ್ದು ಕಾರ್ಯಕ್ರಮಗಳ ಅನುಷ್ಠಾನಕ್ಕೆ ಪ್ರತಿ ಹೆರಿಟೇಜ್ ಕ್ಲಬ್ಬಿಗೆ ರೂ. 10000/–ಕ್ಕೆ ಬದಲಾಗಿ ರೂ. 20000/– ಅನುದಾನ ಹೆಚ್ಚಿಸಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 186 ಕೆಎಂಯು 2007, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಾ:ವ:ಸಂ: ಪರಂಪರೆ ಇಲಾಖೆಯು 20 ಜಿಲ್ಲೆಗಳಲ್ಲಿ ಸ್ಥಾಪಿಸಿರುವ 20 ಪರಂಪರೆ ಕೂಟಗಳಿಗೆ ಹೆಚ್ಚುವರಿಯಾಗಿ ತಲಾ ರೂ. 10000/– (ರೂಪಾಯಿ ಹತ್ತು ಸಾವಿರಗಳು ಮಾತ್ರ) ವೆಚ್ಚ ಮಾಡಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನಲ್ಲಿ ಇಲಾಖೆಗೆ ಯೋಜನೆ ಕಾರ್ಯಕ್ರಮದಡಿ ಬಿಡುಗಡೆ ಮಾಡಿರುವ ಅನುದಾನದ ಉಳಿತಾಯದಲ್ಲಿ ಲೆಕ್ಕಶೀರ್ಷಿಕೆ 2205–00–103–0–21–159–ಇತರೆ ವೆಚ್ಚಗಳು ಅಡಿ ಪುನರ್ ವಿನಿಯೋಗದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಇಲಾಖೆಗೆ ಪ್ರದತ್ತವಾದ ಆರ್ಥಿಕ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 460

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಜಿ.ಸಿ. ಸವಣೂರು, ಅನುಯಾಯಿ–30, ಕೆಎಸ್‌ಆರ್‌ಪಿ, ಹುಬ್ಬಳ್ಳಿ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ ಮೀಸಲು ಪೊಲೀಸ್, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಇ/44/97–98 ದಿನಾಂಕ 9–7–1998.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ಕರ್ನಾಟಕ ರಾಜ್ಯ ಮೀಸಲು ಪೊಲೀಸ್, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/10/1999–2000 ದಿನಾಂಕ 3–11–1999.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 11–1–2007.
4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)146/2006–07, ದಿನಾಂಕ 5–5–2007.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 157 CNS 2007, dated: 8-2-2008.

**ಪ್ರಸ್ತಾವನೆ :**

ಶ್ರೀ ಜಿ.ಸಿ. ಸವಣೂರು, ಅನುಯಾಯಿ–30, ಕೆಎಸ್‌ಆರ್‌ಪಿ, ಹುಬ್ಬಳ್ಳಿ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

1) ಶ್ರೀ ಜಿ.ಸಿ. ಸವಣೂರು, ಅನುಯಾಯಿ–30, ಕೆಎಸ್‌ಆರ್‌ಪಿ, ಹುಬ್ಬಳ್ಳಿ ನೀವು ದಿನಾಂಕ: 25–11–1996ರ 1600 ಗಂಟೆಯಿಂದ ಬಳ್ಳಾರಿ ವಿಶೇಷ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿದ್ದು ಹಾಗೂ ದಿನಾಂಕ 1–12–1996ರಂದು ಬೆಳಿಗ್ಗೆ 0900 ಘಂಟೆಯ ಸುಮಾರಿಗೆ ರೋಲ್‌ಕಾಲ್ ಸಮಯದಲ್ಲಿ ಸದರಿ ಸಿಬ್ಬಂದಿ ಜನರ ಮಧ್ಯೆ ಹಿಂದಿನಿಂದ ನುಸುಳಿ ಅವಾಚ್ಯ ಶಬ್ದಗಳಿಂದ ಬೈಯುತ್ತಾ ಕೈಯಲ್ಲಿ ಚಪ್ಪಲಿ ಹಿಡಿದು ಶ್ರೀ ಎಂ.ಬಿ. ಚಿತ್ರಶೇಖರ್, ಆರ್‌ಎಸ್‌ಐ ರವರ ಶರ್ಟಿನ ಪಟ್ಟಿ ಹಿಡಿದು ಇನ್ನುಳಿದ ಅಧಿಕಾರಿಗಳ ಸಮಕ್ಷಮದಲ್ಲಿ ಹೊಡೆಯಲು ಹೋಗಿದ್ದು ಇವರ ವಿರುದ್ಧ ವಿದ್ಯಾನಗರ ಪೊಲೀಸ್ ಠಾಣೆಯಲ್ಲಿ ಕಲಂ 332, 504, 506, 355 ಐ.ಪಿ.ಸಿ. ಪ್ರಕಾರ ಗುನ್ನೆ ದಾಖಲಾಗಿದ್ದು, ಸದರಿ ಹಿಂಬಾಲಕ ಇವರು ಅನಧಿಕೃತವಾಗಿ ಬಾಹ್ಯ ಕರ್ತವ್ಯದಿಂದ ಗೈರು ಹಾಜರಾಗಿ ಮೇಲಾಧಿಕಾರಿಗಳಿಗೆ ಅಶಿಸ್ತಿನಿಂದ ವರ್ತಿಸಿ ಹೊಡೆಯಲು ಹೋಗಿ ತಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿ, ಅಶಿಸ್ತು ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಆ.ಪೊ.ಅ. ರವರಿಗೆ ಕಾರಣ ಕೇಳುವ ನೋಟೀಸ್ ನೀಡಿ, ನೋಟೀಸ್‌ಗೆ ನೀಡಿದ ಲಿಖಿತ ಉತ್ತರವನ್ನು ಕೂಲಂಕಷವಾಗಿ ಪರಿಶೀಲಿಸಿ, ಆಪಾದನೆಯು ದೃಢಪಟ್ಟಿರುವುದರಿಂದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ ಮೀಸಲು ಪೊಲೀಸ್, ಬೆಂಗಳೂರು ರವರು ಆ.ಪೊ.ಅ. ಇವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ತವ್ಯದಿಂದ ವಜಾ ಮಾಡಲಾಗಿದೆ ಎಂದು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 9–7–1998ರಲ್ಲಿ ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿ ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ಕರ್ನಾಟಕ ರಾಜ್ಯ ಮೀಸಲು ಪೊಲೀಸ್, ಬೆಂಗಳೂರು ರವರು ಶಿಸ್ತು ಪ್ರಾಧಿಕಾರಿಯವರ ಆದೇಶವನ್ನು ಮಾರ್ಪಡಿಸಿ ಸೇವೆಯಿಂದ ವಜಾ ಮಾಡಿದ ಆದೇಶವು ಜಾರಿಯಾದ ದಿನದಿಂದ ಜಾರಿಗೆ ಬರುವಂತೆ ಕೆ.ಸಿ.ಎಸ್.ಆರ್. ನಿಯಮ 95ರ ಉಪನಿಯಮ 3ರ ಪ್ರಕಾರ ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸಲಾಗಿದೆ. ಅವರು ಈ ಹಿಂದೆ ಅಮಾನತ್ತಿಯಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸುವಂತೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 3–11–1999ರಲ್ಲಿ ಆದೇಶಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿ ಪರಿಶೀಲಿಸಲಾಗಿ, ಆ.ಪೊ.ಅ. ರವರು ದಿನಾಂಕ 25–11–1996ರ 1600 ಗಂಟೆಯಿಂದ ಬಳ್ಳಾರಿ ವಿಶೇಷ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವುದು ಒಂದು ಆರೋಪವಾದರೆ, ದಿನಾಂಕ 1–12–1996ರಂದು ಬೆಳಿಗ್ಗೆ 0900 ಘಂಟೆಯ ಸುಮಾರಿಗೆ ರೋಲ್‌ಕಾಲ್ ಸಮಯದಲ್ಲಿ ಸದರಿ ಸಿಬ್ಬಂದಿ ಜನರ ಮಧ್ಯೆ ಹಿಂದಿನಿಂದ ನುಸುಳಿ ಅಧಿಕಾರಿಗೆ ಹೊಡೆದರು ಎನ್ನುವುದು ಇನ್ನೊಂದು ಆರೋಪ. ಒಂದು ದಿನ ವಿಶೇಷ ಕರ್ತವ್ಯದಿಂದ ಅನಧಿಕೃತವಾಗಿ ಗೈರುಹಾಜರಾದರೆ ಮತ್ತು ಯಾವ ಕಾರಣಗಳಿಂದಾಗಿ ಇವರು ರೋಲ್‌ಕಾಲ್ ಸಮಯದಲ್ಲಿ ಜನರ ಮಧ್ಯೆ ಹಿಂದಿನಿಂದ ನುಸುಳಿ ಅವಾಚ್ಯ ಶಬ್ದಗಳಿಂದ ಶ್ರೀ ಎಂ.ಬಿ. ಚಿತ್ರಶೇಖರ್, ಆರ್‌ಎಸ್‌ಐ, ರವರಿಗೆ ಚಪ್ಪಲಿ ಹಿಡಿದು ಹೊಡೆಯಲು ಹೋದರು ಎಂಬುವುದು ನಿಗೂಢವಾಗಿದೆ. ಯಾವುದೇ ಒಬ್ಬ ಕೆಳಮಟ್ಟದ ನೌಕರ ತಮ್ಮ ಮೇಲಿನ ಅಧಿಕಾರಿಗೆ ಈ ರೀತಿ ಕೃತ್ಯ ಎಸಗಲು ಸಕಾರಣಗಳಿರಬೇಕು. ಇಂತಹ ಕಾರಣಗಳಿಂದಾಗಿ ಕೆಳಹಂತದ ಸಿಬ್ಬಂದಿ ವರ್ಗದವರನ್ನು ಸೇವೆಯಿಂದ ವಜಾಗೊಳಿಸುವುದು ಅಥವಾ ಕಡ್ಡಾಯ ನಿವೃತ್ತಿಗೊಳಿಸುವುದು ಮಾಡಿದ್ದಲ್ಲಿ ಅತೀ ತೀವ್ರತರದ ದಂಡನೆಯಾಗುವುದರಿಂದ ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಆ.ಪೊ.ಅ. ರವರನ್ನು ಸೇವೆಗೆ ಪುನರ್ ನೇಮಕ ಮಾಡುವುದು, ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 2 ವರ್ಷಗಳ ಕಾಲ ಪರಿಣಾಮ ಬೀರದಂತೆ ಮುಂದೂಡುವುದು ಹಾಗೂ ಈ ಆದೇಶ ಶಿಸ್ತು ಪ್ರಾಧಿಕಾರ ಹೊರಡಿಸಿದ ದಿನಾಂಕದಿಂದಲೇ ಜಾರಿಗೆ ಬರುತ್ತದೆಂದು ಪರಿಗಣಿಸಲು ಸರ್ಕಾರ ನಿರ್ಧರಿಸಿದೆ. ಇದನ್ನು ಕರ್ನಾಟಕ ಲೋಕಸೇವಾ ಆಯೋಗದ ಅನುಮೋದನೆಗಾಗಿ ಕೋರಲಾಗಿದ್ದು ಆಯೋಗವು ದಿನಾಂಕ 8–2–2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 219 ಪೊಸಿಅ 2007, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಶ್ರೀ ಜಿ.ಸಿ. ಸವಣೂರು ಅನುಯಾಯಿ–30, ಕೆ.ಎಸ್.ಆರ್.ಪಿ. ಹುಬ್ಬಳ್ಳಿ ಇವರನ್ನು ಸೇವೆಗೆ ಪುನರ್ ನೇಮಕ ಮಾಡುವುದು, ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 2 ವರ್ಷಗಳ ಕಾಲ ಪರಿಣಾಮ ಬೀರದಂತೆ ಮುಂದೂಡುವುದು ಪರಿಗಣಿಸಿದೆ ಎಂದು ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 157 ಸಿಎನ್‌ಎಸ್ 2007 ದಿನಾಂಕ: 8–2–2008ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 440

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಬಿ.ಎಸ್. ಚಂದ್ರಶೇಖರ್, ಪಿ.ಎಸ್.ಐ. ಶಿರಾಳಕೊಪ್ಪ ಪೊಲೀಸ್ ಠಾಣೆರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಇವರ ಆದೇಶ ಸಂಖ್ಯೆ: ಸಿಬ್ಬಂದಿ(4)ಶಿಕ್ಷೆ/83/2005, ದಿನಾಂಕ 27–1–2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ: ಅಪೀಲು/5/ಸಿಬ್ಬಂದಿ–2/2006–07, ದಿನಾಂಕ 5–3–07.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 28–6–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು (2)62/2007–08, ದಿನಾಂಕ 19–12–2007.

**ಪ್ರಸ್ತಾವನೆ :**

ಶ್ರೀ ಬಿ.ಎಸ್. ಚಂದ್ರಶೇಖರ್, ಪಿ.ಎಸ್.ಐ. ಶಿರಾಳಕೊಪ್ಪ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

ಶ್ರೀ ಬಿ.ಎಸ್. ಚಂದ್ರಶೇಖರ್, ಪಿ.ಎಸ್.ಐ. ಶಿರಾಳಕೊಪ್ಪ ರವರು ಉಡುಗಣಿ ಗ್ರಾಮದಲ್ಲಿ ದಿನಾಂಕ: 12–10–05ರಂದು ದಸರಾ ಮೆರವಣಿಗೆ ಇದ್ದರೂ ಮೇಲಾಧಿಕಾರಿಗಳಿಗೆ ಈ ಬಗ್ಗೆ ತಿಳಿಸದೆ, ಸೂಕ್ತ ಬಂದೋಬಸ್ತ್ ವ್ಯವಸ್ಥೆ ಮಾಡದೇ ಇದ್ದು, ಹಿಂದು–ಮುಸ್ಲಿಂ ಘರ್ಷಣೆಯಾಗಿ ಮಾಜಿ ಗ್ರಾಮ ಪಂಚಾಯಿತಿ ಸದಸ್ಯರು ಹಲ್ಲೆಗೊಳಗಾಗಲು ಹಾಗೂ ಶಿರಾಳಕೊಪ್ಪ ಠಾಣೆಯಲ್ಲಿ ಗುನ್ನೆ ನಂ. 173/05, ಕಲಂ 143, 144, 147, 148, 807 ಸಹಿತ 149 ಐಪಿಸಿ ರೀತ್ಯಾ ಪ್ರಕರಣ ದಾಖಲಾಗಲು ಕಾರಣಕರ್ತರಾಗಿ ನಿಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿ ನಿರ್ಲಕ್ಷ್ಯತೆ ಪ್ರದರ್ಶಿಸಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 27–1–2006ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 6 ತಿಂಗಳ ಕಾಲ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 5–3–07ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ.

ಶಿರಾಳಕೊಪ್ಪ ಠಾಣೆ ವ್ಯಾಪ್ತಿಯಲ್ಲಿ ದಿ: 12–10–2005ರಂದು ಸಂಜೆ 6–15ಕ್ಕೆ ದಸರಾ ಮೆರವಣಿಗೆ ಮುಗಿದಿದ್ದರೂ ಸಹ ಉಡುಗಣಿ ಗ್ರಾಮಕ್ಕೆ ತೆರಳಿ ದಸರಾ ಮೆರವಣಿಗೆಯ ಉಸ್ತುವಾರಿಯನ್ನು ವಹಿಸಿಕೊಂಡಿರುವುದಿಲ್ಲ. ಸದರಿ ಗ್ರಾಮದಲ್ಲಿ ರಾತ್ರಿ 8 ಘಂಟೆಗೆ ಹಿಂದೂ ಮುಸ್ಲಿಂ ಘರ್ಷಣೆಯಾಗಿದ್ದು, ಗ್ರಾಮ ಪಂಚಾಯಿತಿ ಸದಸ್ಯರಾದ ಶ್ರೀ ಷಣ್ಮುಖರವರು ಹಲ್ಲೆಗೊಳಗಾಗಿರುತ್ತಾರೆ. ಆಪಾದಿತ ಅಧಿಕಾರಿಯು ಈ ಘಟನೆ ನಡೆಯುವ ಮೊದಲೇ ಉಡುಗಣಿ ಗ್ರಾಮಕ್ಕೆ ತೆರಳಿದ್ದಲ್ಲಿ ಈ ಘಟನೆಯನ್ನು ತಪ್ಪಿಸಬಹುದಾಗಿತ್ತು. ಇವರ ಮೇಲಿನ ಆಪಾದನೆಗಳು ಗಂಭೀರ ಸ್ವರೂಪದ್ದಾಗಿದ್ದು, ಶಿವಮೊಗ್ಗ ಲೋಕಾಯುಕ್ತ ಠಾಣೆಯಲ್ಲಿ ಪ್ರಕರಣ ದಾಖಲಾಗಿರುತ್ತದೆ. ಅಲ್ಲದೇ, ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಮಟ್ಟಿಗೆ ಮಾತ್ರ ಮುಂದಿಮ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡಿದ್ದು, ಈ ಶಿಕ್ಷೆಯು ಕಡಿಮೆ ಪ್ರಮಾಣದ್ದಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 04 ಪೊಸಿಅ 2008, ಬೆಂಗಳೂರು, ದಿನಾಂಕ: 24ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಎಸ್. ಚಂದ್ರಶೇಖರ್, ಪಿ.ಎಸ್.ಐ. ಶಿರಾಳಕೊಪ್ಪ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 207

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## COMMERCE AND INDUSTRIES SECRETARIAT

**Sub :** Permission to M/s Dalmia Cement (Bharat) Ltd., to establish “Green Field Cement Plant – 4 Million Tones Capacity with 45 MW Captive Thermal Power Generation Plant” in Yadwad Village, Gokak Taluk, Belgaum District – Reg.

**Read:**
1. Proceedings of the 11th State High Level Clearance Committee meeting held on 28-9-2007.
2. Proceedings of the 13th State High Level Clearance Committee [SHLCC] meeting held on 13.3.2008.

**Preamble:**

M/s Dalmia Cement (Bharat) Ltd., has proposed to establish “Green Field Cement Plant – 4 Million Tonnes Capacity with 45 MW Captive Thermal Power Generation Plant” in 300 acres of land for factory & township and 1736.70 acres for mining, in Yadwad Village, Gokak Taluk, Belgaum District, with an investment of Rs.1047.20 crores. The project proposes to provide employment to about 404 persons. The Company has requested for approval of the project and sanction of various Infrastructure facilities as well as incentives and concessions.

The State High Level Clearance Committee, [SHLCC] in its meeting held on 13-3-2008, after detailed discussion of the project proposal of the said Company, approved the proposal and decided to grant Infrastructure facilities and to extend incentives & concessions. Hence the following order.

**GOVERNMENT ORDER NO: CI 75 SPI 2008, BANGALORE DATED 2nd May 2008**

In the circumstances explained above, Government is pleased to approve the Project proposal of M/s. Dalmia Cement (Bharat) Ltd., to establish “Green Field Cement Plant – 4 Million Tonnes Capacity with 45 MW Captive Thermal Power Generation Plant” in 300 acres of land for factory & township and 1736.7 acres of land (1736.70 acres) for mining, at Yadwad Village, Gokak Taluk, Belgaum District, with an investment of Rs.1047.20 crores and extend the following infrastructure facilities, incentives and concessions.

**INFRASTRUCTURE FACILITIES:**

**Land:** The Revenue Department, to permit the company to purchase 300 acres of land for factory & township and 1736.7 acres of land (1736.70 acres) for mining in various Sy.Nos. of Yadwad Village, Gokak Taluk, Belgaum District u/s. 109 of KLR Act and to convert the land for industrial purpose thereafter. Details of Sy.Nos. appended at annexure 1A & 1B for Factory and Mining respectively.

**Power:** 45,000 KVA temporary power to be supplied by HESCOM during construction period.

**Water :** Water Resources Department to permit the Company to draw 30 lakh LPD of water from Ghataprabha river, subject to availability. The company shall adopt rain water harvesting and water recycling.

**Incentives and Concessions:** As per New Industrial Policy 2006-2011.

**Environment:** KSPCB to issue CFE as per their norms. The company shall obtain environment clearance from MOEF, GOI. No civil works shall commence prior to obtaining ECC.

**Employment:** Project proponents shall play a proactive role in enhancing the employability of the local job seekers, including the land losers. Further, the Company shall prepare a plan for development of human resource required for the project, train local people and provide employment to these trained local youth and comply with Government policy of Employment to local people i.e., Dr. Sarojini Mahishi report. A copy of human resource development plan shall be sent to the Commissioner for I.D. & Director of Industries and Commerce for monitoring.

**Vendor Development:** Where ever there is scope for vendor development for the project, the company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**Social Infrastructure Development:** The Company is advised to take up Social infrastructure development projects in the vicinity of proposed location of the unit. A copy of such projects shall be sent to the Government.

**Others:**

- The promoter shall take all statutory and other necessary clearance and plan approval from competent authority and shall submit milestones/progress in implementation of the project regularly, which will be monitored by the Departments concerned.

This approval is valid for a period of two years from the date of issue.

By Order and in the name of the President of India,

**B.R. NAGABHUSHANA**

Desk Officer (Technical Cell)

Commerce & Industries Department

**Annexure to Government Order No. CI 75 SPI 2008, dt: 2nd May 2008**

**Annexure 1-A**

**Dalmia Cement (Bharat) Limited – New Delhi**

**List of Survey Nos. for Greenfield cement plant**

**Village Yadwad, Taluk Gokak, District Belgaum (Karnataka)**

| Survey No. | Survey No. | Survey No. |
|---|---|---|
| 318 | 319 | 320 |
| 321 | 322 | 323 |
| 324 | 325 | 326 |
| 327 | 328 | 329 |
| 352 | 353 | 354 |
| 355 | 356 | 357 |
| 358 | 359 | 360 |
| 361 | 362 | 363 |
| 364 | 365 | 366 |
| 369 | 370 | 371 |
| 372 | 373 | |

**Annexure 1-B**
**Dalmia Cement (Bharat) Limited**
**List of Khasra applied for mining lease in Yadwad Village in**
**Gokak Taluk, Belgaum District, Karnataka**
**Total applied area for mining lease 694.69 Hectares**

| Survey No. | Survey No. | Survey No. | Survey No. |
|---|---|---|---|
| 218 | 354 | 382 | 421 |
| 219 | 355 | 383 | 422 |
| 256(P) | 356 | 384(P) | 423 |
| 318(P) | 358 | 386(P) | 424 |
| 319(P) | 359 | 387(P) | 425 |
| 320(P) | 360 | 388 | 426 |
| 321(P) | 361 | 389 | 427 |
| 322(P) | 362 | 390 | 428 |
| 323(P) | 363 | 391 | 429 |
| 324(P) | 364 | 392 | 430 |
| 325(P) | 364 | 393(P) | 431 |
| 326(P) | 365 | 404 | 432 |
| 327(P) | 366 | 405 | 433 |
| 328(P) | 367 | 406 | 434 |
| 329(P) | 368 | 407 | 439 |
| 330(P) | 369 | 408 | 440 |
| 342(P) | 370 | 409 | 441 |
| 343(P) | 371 | 410 | 442 |
| 344 | 372 | 411 | 443 |
| 345 | 373 | 412 | 444 |
| 346 | 374 | 413 | 445 |
| 347 | 375 | 414 | 446 |
| 348 | 376 | 415 | 447 |
| 349 | 377 | 416 | 448 |
| 350 | 378 | 417 | 449 |
| 351 | 379 | 418 | |
| 352 | 380 | 419 | |
| 353 | 381 | 420 | |

**B.R. NAGABHUSHANA**
Desk Officer (Technical Cell)
Commerce & Industries Department

P.R. 772

**Sub:** Approval of proposal of M/s Jupiter Aviation and Logistics Pvt. Ltd., to establish an "Aviation training academy, IT campus & Inland Container Depot", in Hassan, Hassan District -Reg.

**Ref:** 1) Government Order No. PWD 2 ECA 2007, dated 12-7-2007.
2) Proceedings of the 10th & 13th State High Level Clearance Committee (SHLCC) meeting held on 28.8.2007 & 13.3.2008.

**Preamble:**

Proposal of M/s Jupiter Aviation and Logistics Pvt. Ltd is to establish an "Aviation training academy, IT campus & Inland Container Depot" in 540 acres of land at Hassan, Hassan District, with an investment of Rs.630 crores. The proposed project will provide employment to about 6500 persons. M/s Jupiter Aviation and Logistics Pvt. Ltd., has been awarded the work of establishing the Greenfield Airport at Hassan on DBOT (Design Build Operate - Transfer) basis vide Government Order read at (1)

above. The uses anticipated in the immediate vicinity of the Airport area are Aviation Training Centre - 180 acres, MRO facility -140 acres, Inland container Depot -150 acres, Golf Course -234 acres, Hospitality and Welfare – 300 acres, Technology Park -430 acres and Internal Road -106 acres. The Company has requested for approval of the project and sanction of various infrastructure facilities as well as incentives and concessions.

The State High Level Clearance Committee (SHLCC), in its meeting held on 13-3-2008, after detailed discussion, approved the proposal of M/s Jupiter Aviation and Logistics Pvt. Ltd, and decided to grant infrastructure facilities and to extend incentives and concessions. Hence, the following order.

**GOVERNMENT ORDER NO: CI 109 SPI 2008, BANGALORE DATED: 3rd May 2008**

The Government is pleased to approve the project proposal of M/s Jupiter Aviation and Logistics Pvt. Ltd, to establish an "Aviation training academy, IT campus & Inland Container Depot" in 540 acres of land at Hassan, Hassan District, with an investment of Rs. 630 crores and extend the following infrastructure facilities, incentives and concessions.

**INFRASTRUCTURE FACILITIES:**

**Land:** KIADB to acquire the land on consent basis & allot 540 acres, adjacent to proposed Airport at Hassan, Hassan District. The company shall obtain consent of the land owners for minimum 70% of the proposed area of the project before commencement of acquisition by KIADB. The company shall adhere to the "Integrated Development Plan" prepared by PWD for development of Airport and surrounding area. The project proponents to provide employment for atleast one member of the family of each land loser.

**Power:** 3000 KVA power to be serviced from CESCOM.

**Water:** Total water requirement 1.75 MLD of water shall be met as under:

a) 1.05 MLD of fresh water from KUWS & DB and

b) remaining 0.70 MLD of treated water from KUWS & DB. The Promoters should discuss this issue and usage of treated water with the Hassan Municipal Corporation and KUWS & DB.

c) The company shall adopt rainwater harvesting and water recycling.

**Incentives and Concessions:** As per Millennium IT Policy for I.T component of the project.

**Environment:** KSPCB to issue CFE as per their norms. The company shall obtain environmental clearance from State. No civil works shall commence prior to obtaining ECC.

**Employment:** Project proponents shall play a proactive role in enhancing the employability of the local job seekers, including the land losers. Further, the Company shall prepare a plan for development of human resources required for the project, train local people and provide employment to these trained local youth and comply with Government policy of Employment to local people i.e., Dr. Sarojini Mahishi Report. A copy of human resources development plan shall be sent to the Commissioner for I.D. & Director of Industries and Commerce for monitoring.

**Vendor Development:** Where ever there is scope for vendor development for the project, the company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**Social Infrastructure Development:** The Company is advised to take up social infrastructure development projects in the vicinity of proposed location of the unit. A copy of such projects shall be sent to the Government.

**Others:** The promoter shall take all statutory and other necessary clearances and shall submit milestones/ progress in implementation of the project regularly, which will be monitored by the Departments concerned.

This approval is valid for a period of two years from the date of issue.

By Order and in the name of the President of India,

P.R.750

**B.R. NAGABHUSHANA**
Desk Officer (Technical Cell)
Commerce & Industries Department

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ದಾದಾರಾವ್, ಹಿಂದಿನ ಸಹಾಯಕ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಕೆ.ಜಿ.ಎಫ್. (ಪ್ರಸ್ತುತ ಅಮಾನತ್ತಿನಲ್ಲಿರುವ) ಇವರನ್ನು ಸೇವೆಗೆ ಪುನರ್ ನಿಯುಕ್ತಿಗೊಳಿಸುವ ಬಗ್ಗೆ.

**ಓದಲಾಗಿದೆ :** 1) ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಇವರ ಆದೇಶ ಸಂ. ಇಎಲ್‌ಎನ್‌ಸಿಆರ್ 37, 2007–08, ದಿನಾಂಕ 24–12–2007.

2) ಸರ್ಕಾರದ ಆದೇಶ ಸಂ. ಆರ್‌ಡಿ 01 ಎಡಿಇ 2008, ದಿನಾಂಕ 25–1–2008.

**ಪ್ರಸ್ತಾವನೆ :**

ಶ್ರೀ ದಾದಾರಾವ್, ಹಿಂದಿನ ಸಹಾಯಕ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಕೆ.ಜಿ.ಎಫ್. ಇವರು ಕೆ.ಜಿ.ಎಫ್. ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಅನೋಪಚಾರಿಕ ಪಡಿತರ ಕೇಂದ್ರ ಸಹಾಯಕ ಮತದಾರರ ನೋಂದಣಾಧಿಕಾರಿಯ ಕಾರ್ಯವನ್ನು ನಿರ್ವಹಿಸದೇ ಕರ್ತವ್ಯ ಲೋಪ ಎಸಗಿರುವುದು ಮೇಲುನೋಟಕ್ಕೆ ಕಂಡುಬಂದಿದ್ದರಿಂದ ಮೇಲೆ ಓದಲಾದ ಕ್ರಮಸಂಖ್ಯೆ: (1) ದಿನಾಂಕ 24–12–2007ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ ಇವರು ಕಂದಾಯ ಇಲಾಖೆಯ ಘಟನೋತ್ತರ ಅನುಮೋದನೆ ನಿರೀಕ್ಷಿಸಿ, ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಕೆ.ಸಿ.ಎಸ್.ಆರ್. ನಿಯಮ 10 (1)ರಂತೆ ಅಮಾನತ್ತಿನಲ್ಲಿಟ್ಟು ಆದೇಶಿಸಲಾಗಿತ್ತು.

ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಇವರು ಹೊರಡಿಸಿರುವ ದಿನಾಂಕ 24–12–2007ರ ಅಮಾನತ್ತು ಆದೇಶಕ್ಕೆ ಸರ್ಕಾರವು ಘಟನೋತ್ತರ ಮಂಜೂರಾತಿಯನ್ನು ನೀಡಲಾಗಿರುತ್ತದೆ. ಶ್ರೀ ದಾದಾರಾವ್, (ಅಮಾನತ್ತಿನಲ್ಲಿ) ತಹಶೀಲ್ದಾರ್ ಇವರು ದಿನಾಂಕ 19–2–2008ರಂದು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸುತ್ತಾ ತಮಗೆ ಈಗಾಗಲೇ ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಚುನಾವಣೆ) ಬೆಂಗಳೂರುರವರು ದಿನಾಂಕ 31–12–2007ರನ್ವಯ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿದ್ದು, ಸದರಿ ನೋಟಿಸಿಗೆ ತಮ್ಮ ಲಿಖಿತ ಸಮಜಾಯಿಷಿಯನ್ನು ಸಹ ನೀಡಲಾಗಿದ್ದರಿಂದ ಹಾಗೂ ದಿನಾಂಕ 31–8–2008ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದುತ್ತಿರುವುದಾಗಿ ತಿಳಿಸುತ್ತಾ, ತಮ್ಮ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಸೇವೆಗೆ ಪುನರ್ ನಿಯುಕ್ತಿಗೊಳಿಸುವಂತೆ ಕೋರಿರುತ್ತಾರೆ. ಈ ಬಗ್ಗೆ ಸರ್ಕಾರವು ಸದರಿಯವರ ಮನವಿಯನ್ನು ಒಪ್ಪಿ ಅಮಾನತ್ತಿನಿಂದ ತೆರವುಗೊಳಿಸಿ ಸೇವೆಗೆ ಪುನರ್ ನಿಯುಕ್ತಿಗೊಳಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 01 ಎಡಿಇ 2008, ಬೆಂಗಳೂರು, ದಿನಾಂಕ: 2ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಶ್ರೀ ದಾದಾರಾವ್, ತಹಶೀಲ್ದಾರ್, ನಿಯೋಜನೆಯಲ್ಲಿದ್ದ ಹಿಂದಿನ ಸಹಾಯಕ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಕೆ.ಜಿ.ಎಫ್. ಪ್ರಸ್ತುತ ಅಮಾನತ್ತಿನಲ್ಲಿರುವ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 10(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು, ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ಬಿಡುಗಡೆಗೊಳಿಸಿ ಇವರನ್ನು ತಹಶೀಲ್ದಾರ್, ಬಿ.ಎಂ.ಟಿ.ಎಫ್. ಬೆಂಗಳೂರು ಇಲ್ಲಿನ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 600

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**COMMERCE AND INDUSTRIES SECRETARIAT**

**Sub:** Permission to M/s. Vijayanagar Sugar Pvt. Ltd., to establish an "Integrated Sugar Mill of 5000 TCD capacity with 30 MW Co-gen Plant and 120 KLPD Distillery", at Gangapura and Shirnahalli Villages, Mundargi Taluk, Gadag District-Reg.

**Read:** 1) G.O. No. CI 88 SPI 2008, dated 2-5-2008.

2) G.O. No. WRD 82 MTP 2007, dated 29-4-2007.

3) Letter dated 5-5-2008 of Authorized Signatory, M/s Vijayanagar Sugars Pvt. Ltd.,

**Preamble:**

In the G.O. No. read at (1), Government approved the project proposal of M/s Vijayanagar Sugars Pvt. Ltd., to establish an integrated Sugar Mill of 5000 TCD capacity with 30 MW Co-gen Plant and 120 KLPD Distillery in 233 acres of land at various Sy. Nos. of Gangapura and Shirnahalli villages, Mundargi

Taluk, Gadag District, with an investment of Rs. 245.00 crores and company was permitted to draw 15 lakh lpd of water from down stream of Tungabhadra River subject to availability.

In the G.O. read at (2), Water Resources Department permitted the M/s Vijayanagar Sugar Pvt. Ltd., to draw 15.75 million lpd of water from the upstream of Tungabhadra River. The SHLCC has also sanctioned 15.75 mlt of water to the project in the meeting held on 17-3-2008.

Further the authorized signatory of M/s Vijayanagar Sugar Pvt. Ltd., in his letter read at (3) has requested the Government to modify the G.O. dated 3-5-2008 accordingly.

**Government Order No. CI 88 SPI 2008, Bangalore, Dated 12th May 2008**

The proposal has been examined again in detail. In partial modification of G.O. No. CI 88 SPI 2008, dated 2-5-2008, the Government is pleased to permit M/s Vijayanagar Sugar Pvt. Ltd., to draw 15.75 million lpd of water from upstream of Tungabhadra River instead of 15 lakhs lpd subject to availability.

By Order and in the name of the President of India,

P.R. 791

**B.R. NAGABHUSHANA**

Desk Officer (Technical Cell)

Commerce & Industries Department

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಜಿ.ಎನ್. ಬಸವರಾಜು, ಹಿಂದಿನ ತಹಶೀಲ್ದಾರ್, ಕಾರವಾರ ಇವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ :**
1) ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪ್ರಸ್ತಾವನೆ ಸಂ: ನಸ್ಥಸಂ/ಚುನಾವಣೆ/ವಿವ/34(6)/07–08, ದಿನಾಂಕ 4–10–2007.
2) ಸರ್ಕಾರದ ಆದೇಶ ಸಂ. ಆರ್‌ಡಿ 37 ಎಡಿಇ 07, ದಿನಾಂಕ 9–10–2007.
3) ಕಾರಣ ಕೇಳುವ ನೋಟೀಸು ದಿನಾಂಕ 3–3–2008.
4) ಶ್ರೀ ಜಿ.ಎನ್. ಬಸವರಾಜು ಇವರ ಲಿಖಿತ ಸಮಜಾಯಿಷಿ ದಿನಾಂಕ 12–3–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ದಿನಾಂಕ 4–10–2007ರ ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ ಕಾರವಾರ ಇವರ ಪ್ರಸ್ತಾವನೆಯಲ್ಲಿ ದಿನಾಂಕ 28–9–2007ರಂದು ನಗರ ಸಭೆ, ಕಾರವಾರ ವಾರ್ಡ್ ಸಂ: 10, ಮತಗಟ್ಟೆ ಸಂಖ್ಯೆ 15ರ ಬಿಟ್ಟುಹೋದ ಮತದಾರರ ಪಟ್ಟಿಯಲ್ಲಿ ಮತದಾರರು ಹೆಸರುಗಳ ಪ್ರತ್ಯೇಕ ಪಟ್ಟಿಯನ್ನು ತಯಾರಿಸಿ ಮತದಾನ ನಡೆಯುತ್ತಿದ್ದಾಗಲೇ ಗುರುತು ಮಾಡಿದ ಮತದಾರರ ಪಟ್ಟಿಗೆ ಸೇರಿಸಿ ಚುನಾವಣಾ ನಿಯಮಗಳನ್ನು ಉಲ್ಲಂಘನೆ ಮಾಡಿರುವುದರಿಂದ ಶ್ರೀಮತಿ ಶುಭಲತಾ, ಆಸ್ನೋಟಿಕರ ಹಾಗೂ ಅವರ ಮಗನಿಗೆ ಮತದಾನ ಮಾಡಲು ಅನುಕೂಲ ಮಾಡಿಕೊಡಲು ತಹಶೀಲ್ದಾರ್, ಕಾರವಾರ ಇವರು ಕಾರಣಕರ್ತರಾಗಿರುತ್ತಾರೆ. ಚುನಾವಣಾ ನಿಯಮಗಳನ್ನು ಉಲ್ಲಂಘನೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಶ್ರೀ ಜಿ.ಎನ್. ಬಸವರಾಜು, ತಹಶೀಲ್ದಾರ್, ಕಾರವಾರ ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮಗಳ ಅನ್ವಯ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಇಲಾಖಾ ವಿಚಾರಣೆ ಕೈಗೊಳ್ಳುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಸರ್ಕಾರವು ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಜಿ.ಎನ್. ಬಸವರಾಜು, ತಹಶೀಲ್ದಾರ್, ಕಾರವಾರ ಇವರು ದಿನಾಂಕ 28–9–2007ರಂದು ಜರುಗಿದ ನಗರ ಸ್ಥಳೀಯ ಸಂಸ್ಥೆಗಳ ಸಾರ್ವಜನಿಕ ಚುನಾವಣೆಯಲ್ಲಿ ನಗರ ಸಭೆ, ಕಾರವಾರ ವಾರ್ಡ್ ನಂ. 10, ಮತಗಟ್ಟೆ ಸಂಖ್ಯೆ 15ರ ಮತದಾರರ ಪಟ್ಟಿಯಲ್ಲಿ ಬಿಟ್ಟುಹೋದ ಮತದಾರರುಗಳ ಹೆಸರುಗಳ ಪ್ರತ್ಯೇಕ ಪಟ್ಟಿಯನ್ನು ತಯಾರಿಸಿ, ಗುರುತು ಮಾಡಿದ ಮತದಾರರ ಪಟ್ಟಿಗೆ ಸೇರಿಸಿ, ಚುನಾವಣಾ ನಿಯಮಗಳನ್ನು ಉಲ್ಲಂಘಿಸಿರುವುದು ಕರ್ನಾಟಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(i)( ii)ನ್ನು ಉಲ್ಲಂಘನೆ ಆಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 10(1)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜಿ.ಎನ್. ಬಸವರಾಜು, ತಹಶೀಲ್ದಾರ್, ಕಾರವಾರ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ ಈ ಕೂಡಲೇ ಜಾರಿಗೆ ಬರುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 9–10–2007ರ ಆದೇಶದಲ್ಲಿ ಸೇವೆಯಿಂದ ಅಮಾನತ್ತಿನಲ್ಲಿ ಇಡಲಾಗಿತ್ತು.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ಜರುಗಿಸಲು ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ ಇವರಿಂದ ಅನುಬಂಧ 1 ರಿಂದ 4ರ ವರೆಗೆ ಆರೋಪ ಪಟ್ಟಿಗಳನ್ನು ತರಿಸಿ, ಮೇಲೆ ಓದಲಾದ ಕ್ರ.ಸಂ. (3)ರಲ್ಲಿನ ಕಾರಣ

ಕೇಳುವ ನೋಟೀಸಿನೊಂದಿಗೆ ಆರೋಪ ಪಟ್ಟಿಗಳನ್ನು ಜಾರಿ ಮಾಡಲಾಗಿತ್ತು. ಸದರಿಯವರು ಸದರಿ ಆರೋಪಕ್ಕೆ ಸಂಬಂಧಿಸಿದಂತೆ, ತಮ್ಮ ಲಿಖಿತ ಹೇಳಿಕೆ ಸಲ್ಲಿಸಿದ್ದನ್ನು ಪರಿಶೀಲಿಸಿ, ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸಲು ತೀರ್ಮಾನಿಸಲಾಗಿದೆ. ಅದರಂತೆ ವಿಚಾರಣಾಧಿಕಾರಿಗಳನ್ನು ನೇಮಿಸಿ, ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು. ಈ ಅಧಿಕಾರಿಗಳ ವಿರುದ್ಧ ಇದ್ದ ಅಮಾನತ್ತಿನ ಆದೇಶವನ್ನು ತೆರವುಗೊಳಿಸಿ ಮನಃ ಸೇವೆಗೆ ಮನರ್ ಸ್ಥಾಪಿಸಲು ತೀರ್ಮಾನಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 37 ಎಡಿಇ 2007, ಬೆಂಗಳೂರು, ದಿನಾಂಕ: 3ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸರ್ಕಾರವು ಶ್ರೀ ಜಿ.ಎನ್. ಬಸವರಾಜು, ತಹಶೀಲ್ದಾರ್, ಕಾರವಾರ ಹಾಲಿ ಅಮಾನತ್ತಿನಲ್ಲಿರುವ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 10(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ಬಿಡುಗಡೆಗೊಳಿಸಿ ಇವರನ್ನು ವಿಶೇಷ ತಹಶೀಲ್ದಾರ್, ಕೆ.ಎಸ್.ಎಫ್.ಸಿ. ಬೆಂಗಳೂರು ಇಲ್ಲಿನ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 608

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**REVENUE SECRETARIAT**

**Subject :** Misuse of powers –Disciplinary Action against Smt Roopashri, Tahasildar, Bagepalli – suspension orders reg.

**Read :** Letter No. DPAR/CEO/PS/674/2008, dated 29-4-2008 from the Chief Electoral Officer and Ex-officio Principal Secretary to Government, DPAR (Elections) addressed to Principal Secretary to Government, Revenue Department.

**Preamble:**

In the letter read at (1) above, the Chief Electoral Officer and Ex-Officio Principal Secretary to Government, DPAR (Elections) has reported that during the review meeting of Election Commission of India it was brought to the notice that "Ambassador Vehicle" bearing No. APA 5151 was canvassing with loudspeaker with a flag of CPI(M)M without any permission either for the vehicle or for the loudspeaker on 28-4-2008 at 11.30 AM. In the evening on reaching Bagepalli Taluk headquarters it was found that Smt Roopashri, Tahasildar, Bagepalli (ARO 140 Bagepalli Assembly Constituency in Chikkaballapur District) had issued permit on 28-4-2008, despite the vehicle having been sent to the Police Station, Bagepalli, the Election Commission of India noticed the following irregularities from the records with ARO.

1) Registration Certificate (Photo Copy) shows that validity of the vehicle's RC upto 12-12-2007.
2) Date of manufacture of the vehicle as March 1974
3) Date of issue of Registration of vehicle permits issued has been changed by over writing.
4) On enquiry, the Returning Officer stated that ARO was never delegated the authority to issue permits for vehicle nor was any such permission sought from Returning Officer by the ARO.

In the circumstances, Election Commission of India directed to suspend Smt Roopashri, Tahasildar, Bagepalli (who is also ARO for 140 Assembly Constituency, Chikkaballapur District) pending departmental enquiry and to post-suitable officer as Tahasildar, Bagepalli immediately as the election process is in full swing.

The Government examined the recommendation of the Election Commission of India in detail and issued the following order.

**Order No. RD 19 ADE 2008, Bangalore, Dated 29th April 2008**

In the circumstances explained in the preamble, Smt Roopashri, Tahasildar, Bagepalli is kept under suspension as empowered under Rule 10(1)(d) of KCS(CCA) Rules, 1957 with immediate effect, pending departmental enquiry.

As per Rule 98 of KCSRs she is eligible for Subsistence Allowances and she should not leave the headquarters without the permission of Deputy Commissioner, Chikkaballapur under the period of suspension.

By order and in the name of the President of India,

PR. 736

**B.V. CHOWKIMATH**

Under Secretary to Government,
Revenue Department (Services-3).

**ಕಂದಾಯ ಸಚಿವಾಲಯ**

**ವಿಷಯ :** ಬೆಂಗಳೂರು ನಗರ ಜಿಲ್ಲೆ ವ್ಯಾಪ್ತಿಯಲ್ಲಿನ ಸರ್ಕಾರಿ ಜಮೀನುಗಳ ಅತಿಕ್ರಮಣ ಮತ್ತು ಒತ್ತುವರಿ ಪತ್ತೆಹಚ್ಚಲು ಎನ್‌ಪೋರ್ಸ್‌ಮೆಂಟ್ ಸೆಲ್‌ಗೆ (ಅನಧಿಕೃತ ಕಟ್ಟಡಗಳ ನಿರ್ಮಾಣ ತಡೆ ಕೋಶ) ತಾತ್ಕಾಲಿಕವಾಗಿ ಹುದ್ದೆಗಳನ್ನು ಸೃಜಿಸಿದ್ದು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ಪತ್ರ ಸಂಖ್ಯೆ ಪಿಯುಸಿ(ಜಾದ) ಸಿಬ್ಬಂದಿ: ಸಿಆರ್.13/ 06–07, ದಿನಾಂಕ 17–1–2008.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರದ ಆದೇಶ ಸಂಖ್ಯೆ ಕಂಇ 23 ಬಿಎಂಎಂ 2007, ದಿನಾಂಕ 29–1–2007ರ ಆದೇಶದಲ್ಲಿ 5 ಶಿರಸ್ತೇದಾರ್, 7 ಜನ ಪ್ರ.ದ.ಸ. ಮತ್ತು ಒಂದು ದ್ವಿ.ದ.ಸ. ಹುದ್ದೆಗಳನ್ನು ರಿಡಿಪ್ಲಾಯ್‌ಮೆಂಟ್ ಮೂಲಕ ಭರ್ತಿಮಾಡಲು ಹಾಗೂ ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 12 ಎ.ಟಿ.ಎಸ್. 2007, ದಿನಾಂಕ 22–2–2007ರ ಆದೇಶದಲ್ಲಿ 2 ತಹಶೀಲ್ದಾರ್ ಹುದ್ದೆಗಳನ್ನು ಹಾಗೂ ಎರಡು ಮ್ಯಾನೇಜರ್/ ಶಿರಸ್ತೇದಾರ್ ಹುದ್ದೆಗಳನ್ನು ತಾತ್ಕಾಲಿಕವಾಗಿ ಒಂದು ವರ್ಷದ ಮಟ್ಟಿಗೆ ಅಂದರೆ ದಿನಾಂಕ 2–2–2007ರಿಂದ ಜಾರಿಗೆ ಬರುವಂತೆ ಅಧಿಕೃತ ಕಟ್ಟಡಗಳ ನಿರ್ಮಾಣ ತಡೆ ಕೋಶಕ್ಕೆ ಸೃಜಿಸಿ ಆದೇಶಿಸಲಾಗಿತ್ತು. ಪ್ರಸ್ತುತ ಅನಧಿಕೃತ ಕಟ್ಟಡಗಳ ನಿರ್ಮಾಣ ತಡೆ ಕೋಶ (ಎನ್ ಪೋರ್ಸ್‌ಮೆಂಟ್ ಸೆಲ್) ದಲ್ಲಿ ಬೆಂಗಳೂರು ಸುತ್ತಮುತ್ತಲಿನ ಬೆಲೆ ಬಾಳುವ ಸರ್ಕಾರಿ ಜಮೀನುಗಳ ಒತ್ತುವರಿ ಪ್ರಕರಣಗಳನ್ನು ಪತ್ತೆ ಹಚ್ಚಿ ಒತ್ತುವರಿ ಜಮೀನು ತೆರವುಗೊಳಿಸುವ ಕಾರ್ಯವನ್ನು ಸಮರೋಪಾದಿಯಲ್ಲಿ ಮಾಡಲಾಗುತ್ತಿದೆ. ನಿರಂತರವಾಗಿ ಅತಿಕ್ರಮಣ ತಡೆ, ಒತ್ತುವರಿ ತೆರವುಗೊಳಿಸುವ ಕಾರ್ಯ, ಕಲ್ಲುಗಣಿಗಾರಿಕೆ, ಭೂ ಕಳ್ಳತನ ತಡೆ, ಮರಳು ಪಿಲ್ಲರ್ ದಂಧೆ ಬಗ್ಗೆ ತಾಳೆ ನಡೆಸಿ ಕ್ರಿಮಿನಲ್ ಮೊಕದ್ದಮೆಯನ್ನು ಹೂಡಿ ಸರ್ಕಾರಿ ಸ್ವತ್ತನ್ನು ಉಳಿಸಿಕೊಳ್ಳುವ ಬಗ್ಗೆ ಹಾಗೂ ಇನ್ನೂ ಹೆಚ್ಚಿನ ಕಾರ್ಯವಿರುವುದರಿಂದ ಹುದ್ದೆಗಳನ್ನು ಮುಂದುವರೆಸುವ ಅವಶ್ಯಕತೆಯಿದ್ದು, ಈಗಾಗಲೇ ಸೃಜಿಸಿರುವ ಹುದ್ದೆಗಳನ್ನು ಇನ್ನೂ ಒಂದು ವರ್ಷಕ್ಕೆ ಮುಂದುವರಿಸಿ ಆದೇಶಿಸಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಕೋರಿರುವಂತೆ ಇನ್ನೂ ಒಂದು ವರ್ಷದವರೆಗೆ ಹುದ್ದೆಗಳನ್ನು ಮುಂದುವರಿಸಬೇಕಾಗಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 77 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಅನ್ವಯ ಬೆಂಗಳೂರು ನಗರ ಜಿಲ್ಲೆ ವ್ಯಾಪ್ತಿಯಲ್ಲಿನ ಸರ್ಕಾರಿ ಜಮೀನುಗಳ ಅತಿಕ್ರಮಣ ಮತ್ತು ಒತ್ತುವರಿ ಪತ್ತೆಹಚ್ಚಿ ಭೂ ಕಬಳಿಕೆ ವಿರುದ್ಧ ಕ್ರಮ ಜರುಗಿಸಲು ಅನಧಿಕೃತ ಕಟ್ಟಡಗಳ ನಿರ್ಮಾಣ ತಡೆ ಕೋಶ (ಎನ್‌ಪೋರ್ಸ್‌ಮೆಂಟ್‌ಸೆಲ್) ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಇಲ್ಲಿಗೆ ಈ ಕೆಳಕಂಡಂತೆ ಒಂದು ವರ್ಷದವರೆಗೆ ಹುದ್ದೆಗಳನ್ನು ಮುಂದುವರಿಸಿ ಆದೇಶಿಸಲಾಗಿದೆ.

1) ದಿನಾಂಕ 1–2–2008 ರಿಂದ 2–2–2009ರ ವರೆಗೆ

| | |
|---|---|
| ತಹಶೀಲ್ದಾರ್ | 2 ಹುದ್ದೆಗಳು |
| ಶಿರಸ್ತೇದಾರ್/ಮ್ಯಾನೇಜರ್ | 2 ಹುದ್ದೆಗಳು |

2) ರಿಡಿಪ್ಲಾಯ್‌ಮೆಂಟ್ ಮೂಲಕ ಕಾರ್ಯನಿರ್ವಹಿಸುತ್ತಿರುವವರನ್ನು ದಿನಾಂಕ 29–1–2008 ರಿಂದ 28–1–2009ರವರೆಗೆ

| | |
|---|---|
| ಶಿರಸ್ತೇದಾರ್ | 3 ಹುದ್ದೆಗಳು |
| ಪ್ರ.ದ.ಸ. | 7 ಹುದ್ದೆಗಳು |
| ದ್ವಿ.ದ.ಸ. | 1 ಹುದ್ದೆ |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆ.ಇ. 337 ವೆಚ್ಚ–7/2008, ದಿನಾಂಕ 5–4–2008ರಂದು ಸಹಮತಿಸಿದೆ.

ಆ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ. 1 ಟಿ.ಎಫ್.ಪಿ. 96, ದಿನಾಂಕ 10-7-1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ನೀಡಿದ ಅಧಿಕಾರದನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 728

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

**ವಿಷಯ :** ಶ್ರೀ ಮಹದೇವಪ್ಪ ಸಾಸನೂರ್ ತಹಶೀಲ್ದಾರ್ ಇಂಡಿ ಇವರನ್ನು ಸೇವೆಯಿಂದ ಅಮಾನತ್ತು ಮಾಡುವ ಬಗ್ಗೆ.

**ಓದಲಾಗಿದೆ :** (I) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಕರ್ನಾಟಕ ರಾಜ್ಯ ಬೆಂಗಳೂರು ಇವರ ಪತ್ರ ದಿ: 29-12-2007 ಹಾಗೂ ಉಪ ಕಾರ್ಯದರ್ಶಿಯವರು (ಸಕ್ಕರೆ ಮತ್ತು ರೇಷ್ಮೆ) ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅನಧಿಕೃತ ಟಿಪ್ಪಣಿ ದಿನಾಂಕ 11-1-2008.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ 2006-07ನೇ ಸಾಲಿನಲ್ಲಿ ಕಟಾವು ಆಗದೆ ನೊಂದಾಯಿತವಲ್ಲದ ಪಕ್ವವಾದ ಹಾಗೂ ಕಾರ್ಖಾನೆಯಲ್ಲಿ ನುರಿಸಲ್ಪಡದೆ ದಿ: 31-5-2007ರಲ್ಲಿದ್ದಂತೆ ಉಳಿಯುವ ಕಬ್ಬುಗಳಿಗೆ ನಷ್ಟ ಪರಿಹಾರವನ್ನು ಪ್ರತಿ ಹೆಕ್ಟೇರಿಗೆ ಸರ್ಕಾರ ರೂ. 25,000ಗಳ ಪರಿಹಾರ ಧನವನ್ನು ಘೋಷಣೆ ಮಾಡಿರುತ್ತದೆ. ಅದರಂತೆ ಜಿಲ್ಲಾಧಿಕಾರಿಗಳು ಬಿಜಾಪುರ ಜಿಲ್ಲೆಯವರು ಇಂಡಿ ತಾಲ್ಲೂಕಿಗೆ ರೂ. 25.00 ಕೋಟಿ ಕಬ್ಬು ಬೆಳೆ ನಷ್ಟ ಪರಿಹಾರ ಧನವನ್ನು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುವರು. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ನೋಡಿದಾಗ ಪರಿಹಾರಕ್ಕೆ ಅನರ್ಹವಾಗಿದ್ದ ಹಾಗೂ ದಾಖಲೆಗಳನ್ನು ತಿದ್ದಿ ತಪ್ಪು ಮಾಹಿತಿಯೊಳಗೊಂಡಿದ್ದು, ಇದಕ್ಕೆ ಶ್ರೀ ಮಹದೇವಪ್ಪ ಸಾಸನೂರ್, ತಹಶೀಲ್ದಾರ್, ಇಂಡಿ ಇವರು ಕಾರಣರಾಗಿದ್ದಾರೆಂದು ತಿಳಿಸಿರುವರು. ಈ ವಿಷಯವು ದಿನಾಂಕ 28-12-2007ರಲ್ಲಿ ನಡೆದ ಉನ್ನತ ಮಟ್ಟದ ಸಭೆಯಲ್ಲಿ ಚರ್ಚಿಸಲಾಗಿದ್ದು, ಸದರಿ ಅಧಿಕಾರಿಯವರ ವಿರುದ್ಧ ಕ.ನಾ.ಸೇ. (ಸಿ.ಸಿ.ಎ.) ನಿಯಮಾವಳಿ 1957ರ ಪ್ರಕಾರ ಶಿಸ್ತು ಕ್ರಮ ಜರುಗಿಸಲು ಕ್ರಮ ಕೈಗೊಳ್ಳಲು ಸಹ ಸೂಚಿಸಿರುವರು. ಶ್ರೀ ಮಹದೇವಪ್ಪ ಸಾಸನೂರ್ ತಹಶೀಲ್ದಾರ್, ಇಂಡಿ ಇವರು ಕರ್ತವ್ಯಚ್ಯುತಿ ಎಸಗಿದ್ದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಇವರನ್ನು ಸೇವೆಯಿಂದ ಅಮಾನತ್ತು ಮಾಡುವುದು ಅವಶ್ಯಕತೆ ಇರುವುದೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 03 ಎಡಿಇ 2008, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವ.ನಿ. ಮತ್ತು ಮ) ನಿಯಮಗಳ 1957ರ ನಿಯಮ 10(1)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮಹದೇವಪ್ಪ ಸಾಸನೂರ್ ತಹಶೀಲ್ದಾರ್ ಇಂಡಿ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯವರು ಕ.ನಾ.ಸೇ. ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು ಬಿಜಾಪುರ ಜಿಲ್ಲೆ ಇವರ ಅನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 362

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎನ್. ಕೃಷ್ಣಪ್ಪ, ಡಿವೈ.ಎಸ್.ಪಿ. ರವರಿಗೆ ಜೀವನಾಧಾರ ಭತ್ಯೆಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಒಇ 78 ಪೊಸಿಪ 2006, ದಿನಾಂಕ 16-3-2006.

2) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ(5)/57/2005-06, ದಿನಾಂಕ 19-5-2007.

3) ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 78 ಪೊಸಿಪ 2006, ದಿನಾಂಕ 5-10-2007.

**ಪ್ರಸ್ತಾವನೆ :**

ಶ್ರೀ ಎನ್. ಕೃಷ್ಣಪ್ಪ, ಡಿವೈ.ಎಸ್.ಪಿ. ದೊಡ್ಡಬಳ್ಳಾಪುರ ಉಪ ವಿಭಾಗ ರವರು ತಮ್ಮ ಆದಾಯಕ್ಕಿಂತ ಹೆಚ್ಚಿನ ಮೌಲ್ಯದ ಆಸ್ತಿ ಪಾಸ್ತಿಗಳನ್ನು ಹೊಂದಿರುವ ಆಪಾದನೆಯು ಲೋಕಾಯುಕ್ತರ ವರದಿಯಿಂದ ಮೇಲ್ನೋಟಕ್ಕೆ ದೃಢಪಟ್ಟಿರುವುದರಿಂದ

ಕೆ.ಎಸ್.ಪಿ. (ಡಿಪಿ) ನಿಯಮಗಳು, 1965ರ ನಿಯಮ 5(1)ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಶ್ರೀ ಎನ್. ಕೃಷ್ಣಪ್ಪ, ಡಿವೈ.ಎಸ್.ಪಿ. ರವರನ್ನು ಅಮಾನತ್ತುಗೊಳಿಸಿ ಮೇಲೆ ಓದಲಾದ (1)ರ ಆದೇಶ ಹೊರಡಿಸಿದೆ.

ಶ್ರೀ ಎನ್. ಕೃಷ್ಣಪ್ಪ, ಡಿವೈ.ಎಸ್.ಪಿ. ರವರು ದಿನಾಂಕ 29–3–2007ರಂದು ಡಿಜಿ ರವರಿಗೆ ಮನವಿ ಸಲ್ಲಿಸಿ ಇವರ ಅಮಾನತ್ತಿನಲ್ಲಿರುವ 6 ತಿಂಗಳ ನಂತರದ ಅವಧಿಗೆ ಶೇ. 75% ರಷ್ಟು ಮತ್ತು ಒಂದು ವರ್ಷದ ನಂತರದ ಅವಧಿಗೆ ಶೇ. 90%ರಷ್ಟು ಜೀವನಾಧಾರ ಭತ್ಯೆಯನ್ನು ನಿಗಧಿಪಡಿಸಿದ ಆದೇಶವನ್ನು ಹೊರಡಿಸುವಂತೆ ಕೋರಿರುವ ಹಿನ್ನೆಲೆಯಲ್ಲಿ ಮೇಲೆ ಓದಲಾದ (2)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ, ಬೆಂಗಳೂರು ರವರು ಜೀವನಾಧಾರ ಭತ್ಯೆಯನ್ನು ನಿಗಧಿಪಡಿಸಿ ಸದರಿಯವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಿ ರಾಜ್ಯ ಗುಪ್ತವಾರ್ತೆ, ಬೆಂಗಳೂರು ಇಲ್ಲಿಗೆ ನೇಮಿಸುವಂತೆ ಕೋರಿರುತ್ತಾರೆ. ಶ್ರೀ ಎನ್. ಕೃಷ್ಣಮೂರ್ತಿ, ಡಿವೈ.ಎಸ್.ಪಿ. (ಸಿವಿಲ್) ಇವರ ಅಮಾನತ್ತನ್ನು ತೆರವುಗೊಳಿಸಿ ಮೇಲೆ 3ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಸ್ಥಳ ನಿಯುಕ್ತಿಗೊಳಿಸಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 78 ಪೊಸಿಪ 2006, ಬೆಂಗಳೂರು, ದಿನಾಂಕ: 5ನೇ ಜನವರಿ 2008**

ಶ್ರೀ ಎನ್. ಕೃಷ್ಣಪ್ಪ, ಡಿವೈ.ಎಸ್.ಪಿ. (ಸಿವಿಲ್) ಇವರನ್ನು ಅಮಾನತ್ತುಗೊಳಿಸಿದ ಅವಧಿಯ 6 ತಿಂಗಳಿನ ಹೆಚ್ಚಿನ ಅವಧಿಗೆ ಶೇ. 75%ರಷ್ಟು ಹಾಗೂ ಒಂದು ವರ್ಷದ ನಂತರದ ಅವಧಿಗೆ ಶೇ. 90%ರಷ್ಟು ಜೀವನಾಧಾರ ಭತ್ಯೆಯನ್ನು ನಿಗಧಿಪಡಿಸಲು ಸರ್ಕಾರವು ಆದೇಶಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 109

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀರಂಗಪಟ್ಟಣ ಪೊ.ಠಾ. ಮೊಕದ್ದಮೆ ಸಂಖ್ಯೆ: 205/2004, ಕಲಂ 498ಎ, 304ಬಿ ಐಪಿಸಿ ಮತ್ತು 3 ಮತ್ತು 4 ಡಿಪಿ ಕಾಯ್ದೆ ಪ್ರಕರಣದಲ್ಲಿ ಸಮರ್ಪಕ ತನಿಖೆ ಮಾಡದೆ ಲೋಪವೆಸಗಿದ ಶ್ರೀ ಜಿ.ಟಿ. ನಾಯಕ್, ಡಿವೈ.ಎಸ್.ಪಿ. ಇವರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬಿ(5)14/2006–07, ದಿನಾಂಕ 8–5–2007.

**ಪ್ರಸ್ತಾವನೆ :**

ಶ್ರೀರಂಗಪಟ್ಟಣ ಪೊ.ಠಾ. ಮೊಕದ್ದಮೆ ಸಂಖ್ಯೆ: 205/2004, ಕಲಂ 498ಎ, 304ಬಿ ಐಪಿಸಿ ಮತ್ತು 3 ಮತ್ತು 4 ಡಿಪಿ ಕಾಯ್ದೆ ಪ್ರಕರಣದಲ್ಲಿ ಸಮರ್ಪಕ ತನಿಖೆ ಮಾಡದೆ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಕರ್ತವ್ಯ ಚ್ಯುತಿ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿ ಲೋಪವೆಸಗಿದ ಶ್ರೀ ಜಿ.ಟಿ. ನಾಯಕ್, ಅಂದಿನ ಪಿ.ಐ., ಸಿ.ಓ.ಡಿ. ಹಾಲಿ ಡಿವೈ.ಎಸ್.ಪಿ. (ಕ್ರೈಂ) ಡಿ.ಜಿ. ರವರ ಕಛೇರಿ ಇವರ ವಿರುದ್ಧ ಕೆ.ಎಸ್.ಪಿ. (ಡಿ.ಪಿ) ನಿಯಮ 1965/89ರ ನಿಯಮ 6ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಲು ಹಾಗೂ ಡಾ: ಬಿ.ಎ. ಮಹೇಶ್, ಪೊಲೀಸ್ ಅಧೀಕ್ಷಕರು, ಸಿ.ಓ.ಡಿ. ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಸರ್ಕಾರವನ್ನು ಕೋರಿರುತ್ತಾರೆ. ಹಾಗೂ ಈ ಸಂಬಂಧ ದೋಷಾರೋಪಣೆಯ ದಾಖಲೆಗಳನ್ನು ಒದಗಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 339 ಪೊಸಿಪ 2007, ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ಪರಿಶೀಲಿಸಿ ಶ್ರೀ ಜಿ.ಟಿ. ನಾಯಕ್, ಅಂದಿನ ಪಿ.ಐ. ಸಿ.ಓ.ಡಿ. ಹಾಲಿ ಡಿವೈ.ಎಸ್.ಪಿ. ಕ್ರೈಂ, ಡಿ.ಜಿ. ರವರ ಕಛೇರಿ ರವರ ವಿರುದ್ಧ ಕೆ.ಎಸ್.ಪಿ. (ಡಿ.ಪಿ.) ನಿಯಮ 1965ರ ನಿಯಮ 6ರ ಅಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಿದೆ. ಈ ಇಲಾಖಾ ವಿಚಾರಣೆ ನಡೆಸಲು ಡಾ: ಬಿ.ಎ. ಮಹೇಶ್, ಪೊಲೀಸ್ ಅಧೀಕ್ಷಕರು, ಸಿ.ಓ.ಡಿ. ಬೆಂಗಳೂರು ಇವರನ್ನು ವಿಶೇಷ ಅಧಿಕಾರ ಹೊಂದಿದ ಇಲಾಖಾ ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದೆ.

ಈ ಸಂಬಂಧ ದೋಷಾರೋಪಣಾ ಪತ್ರವನ್ನು ಸಹ ಹೊರಡಿಸಲಾಗಿದೆ. ಈ ವಿಚಾರಣೆಯನ್ನು ನಿಯಮಾನುಸಾರ ತನಿಖೆ ನಡೆಸಿ 4 ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿಕೊಡಲು ಸೂಚಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 261

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಕಾರ್ಮಿಕ ಸಚಿವಾಲಯ**

**ವಿಷಯ :** ಕಾರ್ಮಿಕ ಇಲಾಖೆಯ ಕಾರ್ಮಿಕ ಅಧಿಕಾರಿಗಳಿಗೆ ವಾಹನ ಸೌಲಭ್ಯ ಒದಗಿಸುವ –ಬಗ್ಗೆ.

**ಓದಲಾಗಿದೆ :** ಕಾರ್ಮಿಕ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ: ಎಸ್‌ಟಿವೈ/ಸಿಆರ್–52/2006–07, ದಿನಾಂಕ: 11–12–2006.

**ಪ್ರಸ್ತಾವನೆ :**

ಕಾರ್ಮಿಕ ಆಯುಕ್ತರು ಮೇಲೆ ಓದಲಾದ ತಮ್ಮ ದಿನಾಂಕ 11–12–2006ರ ಪತ್ರದಲ್ಲಿ ಕಾರ್ಮಿಕ ಇಲಾಖೆಯಲ್ಲಿ ಕ್ಷೇತ್ರ ಮಟ್ಟದಲ್ಲಿ 5 ಉಪ ಕಾರ್ಮಿಕ ಆಯುಕ್ತರು ಹಾಗೂ ವಿಭಾಗೀಯ ಮಟ್ಟದಲ್ಲಿ 2 ಸಹಾಯಕ ಕಾರ್ಮಿಕ ಆಯುಕ್ತರುಗಳು ಇರುವರೆಂದು ಈ ಅಧಿಕಾರಿಗಳಿಗೆ ವಾಹನ ಸೌಲಭ್ಯವನ್ನು ಒದಗಿಸಲಾಗಿರುತ್ತದೆ. ಉಳಿದ 9 ಜನ ಸಹಾಯಕ ಕಾರ್ಮಿಕ ಆಯುಕ್ತರುಗಳಿಗೆ ಪ್ರತಿ ಮಾಹೆ ಬಾಡಿಗೆ ಆಧಾರದ ಮೇಲೆ ವಾಹನ ಸೌಲಭ್ಯವನ್ನು ಒದಗಿಸಲಾಗಿದೆ. ಕಾರ್ಮಿಕ ಅಧಿಕಾರಿಗಳಿಗೆ ವಾಹನ ಸೌಲಭ್ಯ ಇದುವರೆವಿಗೂ ಒದಗಿಸಿರುವುದಿಲ್ಲ. ಕಾರ್ಮಿಕ ಅಧಿಕಾರಿಗಳ ಕಛೇರಿ ಜಿಲ್ಲಾ ಮಟ್ಟದಲ್ಲಿ ಇರುತ್ತದೆ. ಇವರ ಕಾರ್ಯವ್ಯಾಪ್ತಿ ಸೇರಿದಂತೆ ಇತರೆ ಮಹಾನಗರ ಪಾಲಿಕೆಗಳಲ್ಲಿ ಒಂದಕ್ಕಿಂತ ಹೆಚ್ಚು ಕಾರ್ಮಿಕ ಅಧಿಕಾರಿಗಳ ಕಛೇರಿ ಇರುವುದು ಕೆಲವೊಂದು ಜಿಲ್ಲೆಗಳ ಗಾತ್ರದ ಆಧಾರದ ಮೇಲೆ ಎರಡು ಕಾರ್ಮಿಕ ಅಧಿಕಾರಿಗಳು ಕಾರ್ಯ ನಿರ್ವಹಿಸುತ್ತಿರುತ್ತಾರೆ. ಕಾರ್ಮಿಕ ಅಧಿಕಾರಿಗಳ ಕಛೇರಿ ಅತ್ಯಂತ ಮಹತ್ವದ ಕಛೇರಿಗಳಾಗಿರುತ್ತದೆ. ಕಾರ್ಮಿಕ ಅಧಿಕಾರಿಗಳು ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಪಂಚಾಯತ್ ಸಭೆಗೆ ಪ್ರತಿ ಮಾಹೆ ಹೋಗಬೇಕಾಗಿರುತ್ತದೆ. ಜಿಲ್ಲಾಧಿಕಾರಿಗಳಿಗೆ ಬಾಲ ಕಾರ್ಮಿಕ ಪದ್ಧತಿ ನಿವಾರಣೆಗಾಗಿ ಸಂಪೂರ್ಣ ಸಹಕಾರವನ್ನು ನೀಡಬೇಕಾಗುತ್ತದೆ. ಕಾರ್ಮಿಕ ಅಧಿಕಾರಿಗಳು ಹಲವಾರು ಕಾನೂನುಗಳನ್ನು ಅನುಷ್ಠಾನಕ್ಕೆ ತರುವ ಅಧಿಕಾರವನ್ನು ಹೊಂದಿರುತ್ತಾರೆ. ಹಾಗೆಯೇ ಅವರು ಕಾನೂನು ಅನುಷ್ಠಾನವನ್ನು ತರುವುದರ ಜೊತೆಗೆ ತಮ್ಮ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿರುವ ಹಿರಿಯ ಕಾರ್ಮಿಕ ನಿರೀಕ್ಷಕರು/ ಕಾರ್ಮಿಕ ನಿರೀಕ್ಷಕರುಗಳು ಹಲವಾರು ಕಾನೂನು ಅನುಷ್ಠಾನ ಮಾಡುತ್ತಿರುವ ಕೆಲಸವನ್ನು ಮೇಲ್ವಿಚಾರಿಸಬೇಕಾಗಿರುತ್ತದೆ. ಹಲವಾರು ಕಾನೂನು ಅನುಷ್ಠಾನ ಮಾಡುವ ದಿಸೆಯಲ್ಲಿ ಅನೇಕ ಸಂಘ ಸಂಸ್ಥೆಗಳು, ಕಾರ್ಖಾನೆ ಗ್ರಾಮೀಣ ಪ್ರದೇಶದಲ್ಲಿ ವ್ಯಾಪಿಸಿರುತ್ತವೆ. ಸಕಾಲದಲ್ಲಿ ಹೋಗಿ ಪರಿಣಾಮಕಾರಿಯಾಗಿ ಪರಿವೀಕ್ಷಣೆ ಮಾಡುವುದು ವಾಹನ ಇಲ್ಲದೆ ಕಷ್ಟವಾಗಿರುತ್ತದೆ. ಪರಿಣಾಮಕಾರಿಯಾಗಿ ಕಾನೂನು ಕೆಲಸ ನಿರ್ವಹಿಸಲು ಅಡೆತಡೆ ಉಂಟಾಗುತ್ತಿದೆ ಎಂದು ತ್ವರಿತ ರೀತಿಯಲ್ಲಿ ಕೆಲಸ ನಿರ್ವಹಿಸಿ ಸಂಬಂಧಪಟ್ಟವರಿಗೆ ಪರಿಹಾರ ಒದಗಿಸಬೇಕಾದರೆ ವಾಹನ ಸೌಲಭ್ಯ ಅತಿ ಅವಶ್ಯಕವೆಂದು ತಿಳಿಸಿರುತ್ತಾರೆ.

ಹೆಚ್ಚಿನ ಇಲಾಖೆಯಲ್ಲಿ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ವಾಹನದ ಸೌಲಭ್ಯವನ್ನು ನೀಡಲಾಗಿದೆ. ಅದರಂತೆ ಕಾರ್ಮಿಕ ಇಲಾಖೆಯಲ್ಲಿ ಕಾರ್ಮಿಕ ಅಧಿಕಾರಿಗಳಿಗೆ ವಾಹನ ಸೌಲಭ್ಯ ನೀಡುವುದು ಅತಿ ಅವಶ್ಯವಾಗಿರುತ್ತದೆ. ಕಾರ್ಮಿಕ ಇಲಾಖೆಯಲ್ಲಿ ಒಟ್ಟು 40 ಜನ ಕಾರ್ಮಿಕ ಅಧಿಕಾರಿ ವೃಂದ ಬಲವಿದ್ದು 38 ಜನ ಕಾರ್ಮಿಕ ಅಧಿಕಾರಿಗಳು ಕ್ಷೇತ್ರಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಕೆಳಕಂಡ 38 ಜನ ಕಾರ್ಮಿಕ ಅಧಿಕಾರಿಗಳಿಗೆ ವಾಹನವನ್ನು ಬಾಡಿಗೆ ಆಧಾರದ ಮೇಲೆ ನೀಡುವಂತೆ ಕೋರಿರುತ್ತಾರೆ.

| | |
|---|---|
| 1 | ಕಾರ್ಮಿಕ ಅಧಿಕಾರಿ, ಉಪ ವಿಭಾಗ 1, ಬೆಂಗಳೂರು |
| 2 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–2, ಬೆಂಗಳೂರು |
| 3 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–3, ಬೆಂಗಳೂರು |
| 4 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–4, ಬೆಂಗಳೂರು |
| 5 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–5, ಬೆಂಗಳೂರು |
| 6 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–6, ಬೆಂಗಳೂರು |
| 7 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–1, ಬಳ್ಳಾರಿ |
| 8 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–2, ಬಳ್ಳಾರಿ |
| 9 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–1, ಮಂಗಳೂರು |
| 10 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–2, ಮಂಗಳೂರು |
| 11 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–1, ಹುಬ್ಬಳ್ಳಿ |
| 12 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–2, ಹುಬ್ಬಳ್ಳಿ |
| 13 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–1, ಚಿಕ್ಕಮಗಳೂರು |

| | |
|---|---|
| 20 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–2, ಬೆಳಗಾಂ |
| 21 | ಕಾರ್ಮಿಕ ಅಧಿಕಾರಿ, ಮೈಸೂರು |
| 22 | ಕಾರ್ಮಿಕ ಅಧಿಕಾರಿ, ಕಾರವಾರ |
| 23 | ಕಾರ್ಮಿಕ ಅಧಿಕಾರಿ, ಗುಲಬರ್ಗಾ |
| 24 | ಕಾರ್ಮಿಕ ಅಧಿಕಾರಿ, ತುಮಕೂರು |
| 25 | ಕಾರ್ಮಿಕ ಅಧಿಕಾರಿ, ಹಾಸನ |
| 26 | ಕಾರ್ಮಿಕ ಅಧಿಕಾರಿ, ರಾಯಚೂರು |
| 27 | ಕಾರ್ಮಿಕ ಅಧಿಕಾರಿ, ದಾವಣಗೆರೆ |
| 28 | ಕಾರ್ಮಿಕ ಅಧಿಕಾರಿ, ಕೋಲಾರ |
| 29 | ಕಾರ್ಮಿಕ ಅಧಿಕಾರಿ, ಮಡಿಕೇರಿ |
| 30 | ಕಾರ್ಮಿಕ ಅಧಿಕಾರಿ, ಶಿವಮೊಗ್ಗ |
| 31 | ಕಾರ್ಮಿಕ ಅಧಿಕಾರಿ, ಬೀದರ್ |
| 32 | ಕಾರ್ಮಿಕ ಅಧಿಕಾರಿ, ಗದಗ |

| | | | |
|---|---|---|---|
| 14 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–2, ಚಿಕ್ಕಮಗಳೂರು | 33 | ಕಾರ್ಮಿಕ ಅಧಿಕಾರಿ, ಉಡುಪಿ |
| 15 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–1, ಮಂಡ್ಯ | 34 | ಕಾರ್ಮಿಕ ಅಧಿಕಾರಿ, ಬಾಗಲಕೋಟೆ |
| 16 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–2, ಮಂಡ್ಯ | 35 | ಕಾರ್ಮಿಕ ಅಧಿಕಾರಿ, ಚಿತ್ರದುರ್ಗ |
| 17 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–1, ಬಿಜಾಪುರ | 36 | ಕಾರ್ಮಿಕ ಅಧಿಕಾರಿ, ಹಾವೇರಿ |
| 18 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–2, ಬಿಜಾಪುರ | 37 | ಕಾರ್ಮಿಕ ಅಧಿಕಾರಿ, ಕೊಪ್ಪಳ |
| 19 | ಕಾರ್ಮಿಕ ಅಧಿಕಾರಿ, ಉಪ ವಿಭಾಗ–1, ಬೆಳಗಾಂ | 38 | ಕಾರ್ಮಿಕ ಅಧಿಕಾರಿ, ಚಾಮರಾಜನಗರ |

ಇಲಾಖೆಯ 38 ಮಂದಿ ಕಾರ್ಮಿಕ ಅಧಿಕಾರಿಗಳಿಗೆ ಬಾಡಿಗೆ ಆಧಾರದ ಮೇಲೆ ವಾಹನ ಸೇವೆ ಒದಗಿಸಲು ಪ್ರತಿ ಮಾಹೆಗೆ ರೂ. 7,60,000–00ಗಳಾಗುತ್ತಿದ್ದು, ಇಲಾಖೆಯ ಎಲ್ಲಾ 38 ಜನ ಕಾರ್ಮಿಕ ಅಧಿಕಾರಿಗಳಿಗೆ ಬಾಡಿಗೆ ಆಧಾರದ ಮೇಲೆ ವಾಹನ ಸೇವೆ ಒದಗಿಸಲು ಸರ್ಕಾರದ ಮಂಜೂರಾತಿಯೊಂದಿಗೆ ಅಗತ್ಯವಾಗಿರುವ ಆಯವ್ಯಯವನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 303 ಎಲ್‌ಇಟಿ 2007, ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ 2008**

ಕಾರ್ಮಿಕ ಇಲಾಖೆಯ ಜಿಲ್ಲಾ ಮಟ್ಟದ ಅಧಿಕಾರಿಗಳಾದ ಕಾರ್ಮಿಕ ಅಧಿಕಾರಿಗಳು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಲು ಅನುಕೂಲವಾಗುವಂತೆ ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಲಾಗಿರುವ 38 ಜನ ಕಾರ್ಮಿಕ ಅಧಿಕಾರಿಗಳಿಗೆ 2007–08ನೇ ಸಾಲಿಗೆ ಬಾಹ್ಯ ಮೂಲದಿಂದ ಪ್ರತಿ ತಿಂಗಳು 15 ದಿನಗಳಿಗೆ ಸೀಮಿತಗೊಳಿಸಿ ವಾಹನಗಳನ್ನು ಒದಗಿಸಿಕೊಳ್ಳಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

1. ಆಡಳಿತ ಇಲಾಖೆಯು ಈ ವೆಚ್ಚವನ್ನು ಇಲಾಖೆಗೆ ಒದಗಿಸಲಾದ ಆಯವ್ಯಯದಲ್ಲಿ ಅಂದರೆ ಲೆಕ್ಕಶೀರ್ಷಿಕೆ 2230–01–101–0–01–195–ಸಾರಿಗೆ ವೆಚ್ಚಗಳು–ಯೋಜನೆ–ಯಡಿಯಲ್ಲಿ ಭರಿಸತಕ್ಕದ್ದು.
2. ಸರ್ಕಾರವು ಇದಕ್ಕೆ ಸಂಬಂಧಿಸಿದಂತೆ ಹೆಚ್ಚುವರಿ ಆಯವ್ಯಯವನ್ನು ಈ ಸಾಲಿನಲ್ಲಿ ಒದಗಿಸುವುದಿಲ್ಲ.
3. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಹೊರಡಿಸಿರುವ ಸುತ್ತೋಲೆಯಲ್ಲಿ ನಿಗಧಿಪಡಿಸಿರುವ ದರಗಳಂತೆ ವಾಹನವನ್ನು ಬಾಹ್ಯ ಮೂಲಗಳಿಂದ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 16 ವೆಚ್ಚ–9. 2007, ದಿನಾಂಕ 6–11–2007ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 305

**ಯು.ಎನ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ನೇಮಕಗೊಂಡ ಸಹಾಯಕ ಸರ್ಕಾರಿ ಅಭಿಯೋಜಕರ–ವ–ಸಹಾಯಕ ಸರ್ಕಾರಿ ವಕೀಲರ (ಸಮೂಹ–ಬಿ) ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ ಆದೇಶ.

**ಓದಲಾಗಿದೆ :** 1) ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 3–5–2006.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂ. ಡಿಪಿಎನ್/ಕೇಂಸ/ವಿವ/06/2007–08, ದಿನಾಂಕ 6–12–2007.

**ಸರ್ಕಾರದ ಆದೇಶ ಸಂಖ್ಯೆ: ಒಇ 600 ಪಿಪಿಇ 2007, ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2008**

ಮೇಲೆ ಓದಲಾದ (1) ಸರ್ಕಾರದ ಅಧಿಸೂಚನೆಯಲ್ಲಿ ನೇಮಕಗೊಂಡ ಈ ಕೆಳಕಂಡ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ (ಸಮೂಹ–ಬಿ) ಜನ್ಮ ದಿನಾಂಕವನ್ನು ಅವರವರ ಹೆಸರುಗಳ ಮುಂದೆ ತೋರಿಸಿರುವಂತೆ ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನೀಡಿರುವ ಎಸ್.ಎಸ್.ಎಲ್.ಸಿ. ಮೂಲ ಅಂಕಪಟ್ಟಿಗಳನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) ಕಾಯ್ದೆ 1974ರ ಕಲಂ–3 ಉಪಕಲಂ–2ರ ಅನ್ವಯ ಸರ್ಕಾರವು ಒಪ್ಪಿರುತ್ತದೆ.

| ಕ್ರ. ಸಂ. | ಅಧಿಕಾರಿಯ ಹೆಸರು, ಪದನಾಮ ಮತ್ತು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ನ್ಯಾಯಾಲಯ/ ಸ್ಥಳದ ಹೆಸರು | ಸರ್ಕಾರವು ಒಪ್ಪಿರುವ ಜನ್ಮ ದಿನಾಂಕ |
|---|---|---|
| 1 | 2 | 3 |
| 1 | ಶ್ರೀ ಸೈಯದ್ ಬಲೀಗುರ್ ರೆಹಮಾನ್, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಂತಾಮಣಿ | 4-9-1976 (ನಾಲ್ಕನೇ ಒಂಭತ್ತು ಸಾವಿರದೊಂಬೈನೂರಾ ಎಪ್ಪತ್ತಾರು) |
| 2 | ಶ್ರೀ ಬಿ.ಎಂ. ಬಿಷ್ಠಗೊಂಡ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹುನಗುಂದ | 22-7-1970 (ಇಪ್ಪತ್ತೆರಡು ಏಳು ಸಾವಿರದೊಂಬೈನೂರ ಎಪ್ಪತ್ತು) |
| 3 | ಶ್ರೀಮತಿ ಎಸ್.ಐ. ಮಡಿವಾಳರ, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹಾವೇರಿ | 10-6-1965 (ಹತ್ತು ಆರು ಸಾವಿರದೊಂಬೈನೂರಾ ಅರವತ್ತೈದು) |
| 4 | ಶ್ರೀ ಎಸ್.ಎ. ಹಳೇಮನಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಂಕೇಶ್ವರ | 22-6-1961 (ಇಪ್ಪತ್ತೆರಡು ಆರು ಸಾವಿರದೊಂಬೈನೂರಾ ಅರವತ್ತೊಂದು) |
| 5 | ಶ್ರೀ ಆರ್.ಜಿ. ದೇವರೆಡ್ಡಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಮದುರ್ಗ | 30-4-1974 (ಮೂವತ್ತು ನಾಲ್ಕು ಸಾವಿರದೊಂಬೈನೂರ ಎಪ್ಪತ್ನಾಲ್ಕು) |
| 6 | ಶ್ರೀಮತಿ ಟಿ.ಸಿ. ನಿರ್ಮಲ್ ರಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಕ್ಕಬಳ್ಳಾಪುರ | 16-12-1971 (ಹದಿನಾರು ಹನ್ನೆರಡು ಸಾವಿರದೊಂಬೈನೂರ ಎಪ್ಪತ್ತೊಂದು) |
| 7 | ಶ್ರೀ ಯಾಸೀನ್ ಅಹ್ಮದ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸೋಮವಾರಪೇಟೆ | 1-7-1971 (ಒಂದು ಏಳು ಸಾವಿರದೊಂಬೈನೂರಾ ಎಪ್ಪತ್ತೊಂದು) |
| 8 | ಶ್ರೀ ಎಸ್. ಮಹದೇವ ಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ತಿಪಟೂರು | 1-6-1964 (ಒಂದು ಆರು ಸಾವಿರದೊಂಬೈನೂರಾ ಅರವತ್ನಾಲ್ಕು) |
| 9 | ಶ್ರೀ ಬಿ.ಹೆಚ್. ಭಾಸ್ಕರ್ ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಭದ್ರಾವತಿ | 14-5-1973 (ಹದಿನಾಲ್ಕು ಐದು ಸಾವಿರದೊಂಬೈನೂರಾ ಎಪ್ಪತ್ಮೂರು) |
| 10 | ಶ್ರೀ ಪ್ರಭಾಕರ ರಾವ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಅಳಂದ | 21-7-1973 (ಇಪ್ಪತ್ತೊಂದು ಏಳು ಸಾವಿರದೊಂಬೈನೂರಾ ಎಪ್ಪತ್ಮೂರು) |
| 11 | ಶ್ರೀ ಮಹೇಶ್ ವಿ. ವೈದ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಅಫಜಲಪುರ | 6-7-1973 (ಆರು ಏಳು ಸಾವಿರದೊಂಬೈನೂರಾ ಎಪ್ಪತ್ಮೂರು |
| 12 | ಶ್ರೀಮತಿ ಜ್ಯೋತಿ ಪ್ರಮೋದ ನಾಯಕ್, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕಾರ್ಕಳ | 26-3-1970 (ಇಪ್ಪತ್ತಾರು ಮೂರು ಸಾವಿರದೊಂಬೈನೂರಾ ಎಪ್ಪತ್ತು) |
| 13 | ಶ್ರೀ ಬಾಲವಾಡಿಮಠದ ನಿರಂಜನಮೂರ್ತಿ, ಜೆಎಂಎಫ್‌ಸಿ 2ನೇ ನ್ಯಾಯಾಲಯ, ಬಿಜಾಪುರ | 20-5-1974 (ಇಪ್ಪತ್ತು ಐದು ಸಾವಿರದೊಂಬೈನೂರಾ ಎಪ್ಪತ್ನಾಲ್ಕು) |
| 14 | ಶ್ರೀ ದೇವಾನಂದ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ನಾಗಮಂಗಲ | 14-4-1973 (ಹದಿನಾಲ್ಕು ನಾಲ್ಕು ಸಾವಿರದೊಂಬೈನೂರ ಎಪ್ಪತ್ಮೂರು) |

| 1 | 2 | 3 |
|---|---|---|
| 15 | ಶ್ರೀ ಶೇಖರಪ್ಪ ಶಾಲಿಗನೂರು,<br>ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ದೇವದುರ್ಗ | 1–6–1973 (ಒಂದು ಆರು ಸಾವಿರದೊಂಬೈನೂರಾ ಎಪ್ಪತ್ಮೂರು) |
| 16 | ಶ್ರೀಮತಿ ಎಸ್.ಎಸ್. ಘಂಟಿಮಠ,<br>ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರೋಣ | 28–10–1971 (ಇಪ್ಪತ್ತೆಂಟು ಹತ್ತು ಸಾವಿರದೊಂಬೈನೂರ ಎಪ್ಪತ್ತೊಂದು) |
| 17 | ಶ್ರೀಮತಿ ಹಂಪಮ್ಮ,<br>ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಜೆಎಂಎಫ್‌ಸಿ ನ್ಯಾಯಾಲಯ, ಬೀದರ್ | 1–6–1973 (ಒಂದು ಆರು ಸಾವಿರದೊಂಬೈನೂರಾ ಎಪ್ಪತ್ಮೂರು) |
| 18 | ಶ್ರೀಮತಿ ಎಂ. ಸರ್ವಮಂಗಳ,<br>ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗಂಗಾವತಿ | 12–12–1970 (ಹನ್ನೆರಡು ಹನ್ನೆರಡು ಸಾವಿರದೊಂಬೈನೂರಾ ಎಪ್ಪತ್ತು) |
| 19 | ಶ್ರೀ ಯಲ್ಲಪ್ಪ ಗಂಗಪ್ಪ ತುಂಗಳ,<br>ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಲಿಂಗಸಗೂರು | 22–7–1971 (ಇಪ್ಪತ್ತೆರಡು ಏಳು ಸಾವಿರದೊಂಬೈನೂರಾ ಎಪ್ಪತ್ತೊಂದು) |
| 20 | ಶ್ರೀ ರಾಜೇಶ್ವರ ಎಸ್. ಶೆಟ್ಟಿ,<br>ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮೊಳಕಾಲ್ಮೂರು | 15–5–1974 (ಹದಿನೈದು ಐದು ಸಾವಿರದೊಂಬೈನೂರ ಎಪ್ಪತ್ನಾಲ್ಕು) |
| 21 | ಶ್ರೀಮತಿ ಸಿ.ಕೆ. ಶ್ರೀವಾಣಿ<br>ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗೌರಿಬಿದನೂರು | 23–1–1973 (ಇಪ್ಪತ್ಮೂರು ಒಂದು ಸಾವಿರದೊಂಬೈನೂರಾ ಎಪ್ಪತ್ಮೂರು) |
| 22 | ಶ್ರೀಮತಿ ಪಿ.ಕೆ. ಶಕೀಲಾ ಅಬೂಬ್‌ಕರ್,<br>ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೆ.ಜಿ.ಎಫ್. | 4–2–1970 (ನಾಲ್ಕು ಎರಡು ಸಾವಿರದೊಂಬೈನೂರಾ ಎಪ್ಪತ್ತು) |
| 23 | ಶ್ರೀ ಎನ್.ಎಂ. ರಮೇಶ,<br>ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬೈಲಹೊಂಗಲ | 25–5–1971 (ಇಪ್ಪತ್ತೈದು ಐದು ಸಾವಿರದೊಂಬೈನೂರ ಎಪ್ಪತ್ತೊಂದು) |
| 24 | ಶ್ರೀ ಬಿ.ವಿ. ಪಾಟೀಲ್,<br>ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಕ್ಕೋಡಿ | 1–6–1966 (ಒಂದು ಆರು ಸಾವಿರದೊಂಬೈನೂರಾ ಅರವತ್ತಾರು) |
| 25 | ಶ್ರೀ ಮಾಸ್ಟರ್, ಆರ್.ಕೆ.ಜಿ.ಎಂ.ಎಂ. ಮಹಾಸ್ವಾಮೀಜಿ,<br>ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಂಚೋಳಿ | 21–5–1973 (ಇಪ್ಪತ್ತೊಂದು ಐದು ಸಾವಿರದೊಂಬೈನೂರಾ ಎಪ್ಪತ್ಮೂರು) |
| 26 | ಶ್ರೀ ಎನ್.ಎಂ. ಹಂಜಿ,<br>ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಜೆಎಂಎಫ್‌ಸಿ ನ್ಯಾಯಾಲಯ, ಬಾಗಲಕೋಟೆ | 10–7–1974 (ಹತ್ತು ಏಳು ಸಾವಿರದೊಂಬೈನೂರ ಎಪ್ಪತ್ನಾಲ್ಕು) |
| 27 | ಶ್ರೀ ಅನುರೇವು,<br>ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕಡೂರು | 15–6–1967 (ಹದಿನೈದು ಆರು ಸಾವಿರದೊಂಬೈನೂರಾ ಅರವತ್ತೇಳು) |
| 28 | ಶ್ರೀಮತಿ ಕೆ.ಜಿ. ಅಶ್ವಿನಿ,<br>ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಮಡಿಕೇರಿ | 1–6–1974 (ಒಂದು ಆರು ಸಾವಿರದೊಂಬೈನೂರ ಎಪ್ಪತ್ನಾಲ್ಕು) |

| 1 | 2 | 3 |
|---|---|---|
| 29 | ಶ್ರೀಮತಿ ಎಸ್. ಪುಷ್ಪಲತಾ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಮಂಡ್ಯ | 20–7–1971 (ಇಪ್ಪತ್ತು ಏಳು ಸಾವಿರದೊಂಬೈನೂರಾ ಎಪ್ಪತ್ತೊಂದು) |
| 30 | ಶ್ರೀ ಬಾರಕ್‌ಉಲ್ಲಾ ಹುಸ್ಸೈನಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮಾಲೂರು | 1–7–1963 (ಒಂದು ಏಳು ಸಾವಿರದೊಂಬೈನೂರಾ ಅರವತ್ಮೂರು) |
| 31 | ಶ್ರೀ ಪ್ರಾಣೇಶ್ ಭರತನೂರು, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಜೇವರ್ಗಿ | 8–8–1970 (ಎಂಟು ಎಂಟು ಸಾವಿರದೊಂಬೈನೂರಾ ಎಪ್ಪತ್ತು) |
| 32 | ಶ್ರೀ ಆರ್.ಜಿ. ಕಿರಣಗಿ, ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಜೆಎಂಎಫ್‌ಸಿ ನ್ಯಾಯಾಲಯ, ಗುಲ್ಬರ್ಗ | 1–6–1974 (ಒಂದು ಆರು ಸಾವಿರದೊಂಬೈನೂರ ಎಪ್ಪತ್ನಾಲ್ಕು) |
| 33 | ಶ್ರೀಮತಿ ಯು. ವಿನಯರಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಆಲೂರು | 29–9–1975 (ಇಪ್ಪತ್ತೊಂಬತ್ತು ಒಂಬತ್ತು ಸಾವಿರದೊಂಬೈನೂರಾ ಎಪ್ಪತ್ತೈದು) |
| 34 | ಶ್ರೀ ಎಸ್. ರಾಜಣ್ಣ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಅರಸೀಕೆರೆ | 1–6–1964 (ಒಂದು ಆರು ಸಾವಿರದೊಂಬೈನೂರಾ ಅರವತ್ನಾಲ್ಕು) |
| 35 | ಶ್ರೀಮತಿ ಹೆಚ್.ಆರ್. ಸತ್ಯವತಿ, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ತಿಪಟೂರು | 22–7–1968 (ಇಪ್ಪತ್ತೆರಡು ಏಳು ಸಾವಿರದೊಂಬೈನೂರಾ ಅರವತ್ತೆಂಟು) |
| 36 | ಎನ್.ಎಸ್. ಮಲ್ಲಯ್ಯ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಯಲಬುರ್ಗ | 2–7–1971 (ಎರಡು ಏಳು ಸಾವಿರದೊಂಬೈನೂರಾ ಎಪ್ಪತ್ತೊಂದು) |

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 300

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ. ಮತ್ತು ಸು ಮತ್ತು ಕಾಫಿಪೋಸಾ ಮತ್ತು ಅಭಿಯೋಗ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ರಾಜ್ಯದ ತಾಲ್ಲೂಕು ಕೇಂದ್ರಗಳಲ್ಲಿ ಸಾಮರ್ಥ್ಯಸೌಧ ನಿರ್ಮಾಣ ಮಾಡಲು ಗ್ರಾಮ ಸ್ವರಾಜ್ ಯೋಜನೆಯಡಿ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಕುರಿತು.

**ಉಲ್ಲೇಖ :** ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 119 ಗ್ರಾಸ್ವಯೋ 2007, ದಿನಾಂಕ 29–3–2008.

**ಪ್ರಸ್ತಾವನೆ :**

ವಿಶ್ವಬ್ಯಾಂಕ್ ನೆರವಿನ ಗ್ರಾಮ ಸ್ವರಾಜ್–ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆಯಲ್ಲಿ ಸಾಮರ್ಥ್ಯಸೌಧ ನಿರ್ಮಾಣ ಮಾಡಲು 2007–08ನೇ ಸಾಲಿಗೆ ಉಲ್ಲೇಖಿತ ಆದೇಶದಲ್ಲಿ ಹಿರೇಕೆರೂರು, ಹುಕ್ಕೇರಿ, ದಾವಣಗೆರೆ, ಹೂವಿನಹಡಗಲಿ, ಶಿಡ್ಲಗಟ್ಟ, ಕೋಲಾರ ಬದಾಮಿ, ಹಾನಗಲ್, ಭದ್ರಾವತಿ ತಾಲ್ಲೂಕುಗಳಿಗೆ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡಲಾಗಿತ್ತು. ಕಾರಣಾಂತರದಿಂದಾಗಿ ಟಿಎನ್‌ಎಂಸಿಗೆ ಅಪ್‌ಲೋಡ್ ಮಾಡಲು ಸಾಧ್ಯವಾಗಿರುವುದಿಲ್ಲ. ಕಾರಣ ಸದರಿ ಆದೇಶವನ್ನು ರದ್ದುಗೊಳಿಸಿದೆ.

ಗ್ರಾಮ ಸ್ವರಾಜ್ ಯೋಜನೆಯಡಿ 175 ತಾಲ್ಲೂಕುಗಳ ಪೈಕಿ 89 ತಾಲ್ಲೂಕುಗಳಲ್ಲಿ ಸಾಮರ್ಥ್ಯಸೌಧ ನಿರ್ಮಾಣ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ. ಈ ಸಾಮರ್ಥ್ಯಸೌಧಗಳ ನಿರ್ಮಾಣವು ಪೂರ್ಣಗೊಳ್ಳುವ ಹಂತದಲ್ಲಿದೆ. 2008–09ನೇ ಸಾಲಿನಲ್ಲಿ 89 ಸಾಮರ್ಥ್ಯಸೌಧಗಳ ಪೈಕಿ 52 ಸಾಮರ್ಥ್ಯಸೌಧಗಳ ನಿರ್ಮಾಣಕ್ಕಾಗಿ 2ನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡಬೇಕಾಗಿದೆ. ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 129 ಗ್ರಾಸ್ವಯೋ 2008, ಬೆಂಗಳೂರು, ದಿನಾಂಕ: 28ನೇ ಮೇ 2008**

ಮೇಲಿನ ಪ್ರಸ್ತಾವನೆಯ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿ ಸೂಚಿಸಿರುವಂತೆ 52 ತಾಲ್ಲೂಕು ಪಂಚಾಯತ್‌ಗಳಿಗೆ ಅನುಬಂಧದ ಕಾಲಂ (7)ರಲ್ಲಿ ತೋರಿಸಿದಂತೆ ಎರಡನೇ ಕಂತಿನ ಅನುದಾನ ಒಟ್ಟು ರೂ. 495.00 ಲಕ್ಷ (ನಾಲ್ಕು ಕೋಟಿ ತೊಂಬತ್ತೈದು ಲಕ್ಷ ರೂಪಾಯಿಗಳು ಮಾತ್ರ)ಗಳನ್ನು ಸರ್ಕಾರವು ಬಿಡುಗಡೆ ಮಾಡಿದೆ.

ತಾಲ್ಲೂಕು ಪಂಚಾಯತ್‌ಗಳು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ಅದಕ್ಕೆ ಸಂಬಂಧಿಸಿದ ನಿಯಮಗಳು ಹಾಗೂ ಗ್ರಾಮ ಸ್ವರಾಜ್ ಯೋಜನೆಯಲ್ಲಿ ಹೊರಡಿಸಿದ ಸಂಗ್ರಹಣಾ ಕೈಪಿಡಿ ಅನ್ವಯ ಸಾಮರ್ಥ್ಯಸೌಧದ ನಿರ್ಮಾಣ ಕಾರ್ಯವನ್ನು ಕೈಗೊಳ್ಳಲು ಸೂಚಿಸಿದೆ. ಕರ್ನಾಟಕ ತಾಲ್ಲೂಕು ಪಂಚಾಯತಿಗಳ (ಹಣಕಾಸು ಮತ್ತು ಲೆಕ್ಕ) ಕೈಪಿಡಿ ನಿಯಮ 1996ರ ನಿಯಮ 47(2)ರ ಪ್ರಕಾರ ಜಿಲ್ಲಾ ಪಂಚಾಯತಿಯಿಂದ ಅನುಷ್ಠಾನಗೊಳಿಸಬಹುದು. ಸದರಿ ವೆಚ್ಚವನ್ನು 2008-09ನೇ ಸಾಲಿನ ಲೆಕ್ಕಶೀರ್ಷಿಕೆ 2515-00-101-0-80-059 (ಯೋಜನೆ) ಕರ್ನಾಟಕ ಗ್ರಾಮೀಣ ಬಡತನ ಹಾಗೂ ಪಂಚಾಯತಿ ಯೋಜನೆಯಡಿಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: FD 7 ZPA 2003. ದಿನಾಂಕ 14-7-2005ರ ಸೂಚನೆಗಳನ್ವಯ ಭರಿಸುವುದು. ಈ ಅನುದಾನವನ್ನು ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಿರುವುದರಿಂದ ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ಗಳು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಂದ ಸದರಿ ಮೊತ್ತವನ್ನು ಅಪ್‌ಲೋಡ್ ಮಾಡಿಸಿಕೊಳ್ಳಲು ಕ್ರಮ ತೆಗೆದುಕೊಳ್ಳುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10-7-1996ರಲ್ಲಿ ಆಡಳಿತಾತ್ಮಕ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ ಇವರ ಟಿಪ್ಪಣಿ ಸಂಖ್ಯೆ ಗ್ರಾಅಪ 229 ಪಿಬಿಎಸ್ 2008 ದಿನಾಂಕ 26-5-2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಕೆ. ರಾಜು**

ಮುಖ್ಯಸ್ಥರು, ಗ್ರಾಸ್ವಯೋ,
ಮತ್ತು ನಿರ್ದೇಶಕರು, ಸ್ವಉಕಾ ಹಾಗೂ
ಸರ್ಕಾರದ ಪದನಿಮಿತ್ತ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 129 ಗ್ರಾಸ್ವಯೋ 2008, ದಿನಾಂಕ 28-5-2008ರ ಸಾಮರ್ಥ್ಯಸೌಧ ನಿರ್ಮಾಣಕ್ಕಾಗಿ ಎರಡನೇ ಕಂತಿನ ಅನುದಾನ ಬಿಡುಗಡೆ**

**ಅನುಬಂಧ**

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಜಿಲ್ಲೆ | ತಾಲ್ಲೂಕು ಪಂಚಾಯತಿ | | ಅಂದಾಜು ಮೊತ್ತ | ಯೋಜನೆಯಡಿ ನಿಗಧಿಯಾದ ಅನುದಾನ | ಈಗಾಗಲೇ ಬಿಡುಗಡೆ ಮಾಡಲಾದ ಮೊದಲನೇ ಕಂತಿನ ಅನುದಾನ | ಈಗ ಎರಡನೇ ಕಂತಾಗಿ ಬಿಡುಗಡೆ ಮಾಡಿದ ಮೊತ್ತ |
|---|---|---|---|---|---|---|---|
| 1 | 2 | 3 | | 4 | 5 | 6 | 7 |
| 1 | ಬಾಗಲಕೋಟೆ | 1 | ಬಾದಾಮಿ | 19.00 | 16.00 | 6.00 | 10.00 |
| 2 | ಬೆಳಗಾಂ | 2 | ಹುಕ್ಕೇರಿ | 20.00 | 16.00 | 6.00 | 10.00 |
| | | 3 | ಗೋಕಾಕ್ | 16.00 | 16.00 | 6.00 | 10.00 |
| 3 | ಬಳ್ಳಾರಿ | 4 | ಬಳ್ಳಾರಿ | 16.00 | 16.00 | 6.00 | 10.00 |
| | | 5 | ಹೂವಿನಹಡಗಲಿ | 27.40 | 16.00 | 6.00 | 10.00 |
| 4 | ಬಿಜಾಪುರ | 6 | ಬಿಜಾಪುರ | 16.00 | 16.00 | 6.00 | 10.00 |
| 5 | ಚಾಮರಾಜನಗರ | 7 | ಚಾಮರಾಜನಗರ | 22.55 | 16.00 | 6.00 | 10.00 |
| | | 8 | ಗುಂಡ್ಲುಪೇಟೆ | 22.40 | 16.00 | 6.00 | 10.00 |
| | | 9 | ಕೊಳ್ಳೇಗಾಲ | 22.55 | 16.00 | 6.00 | 10.00 |

| 1 | 2 | 3 | | 4 | 5 | 6 | 7 |
|---|---|---|---|---|---|---|---|
| | | 10 | ಯಳಂದೂರು | 25.00 | 16.00 | 6.00 | 10.00 |
| 6 | ಚಿಕ್ಕಬಳ್ಳಾಪುರ | 11 | ಶಿಡ್ಲಗಟ್ಟ | 24.50 | 16.00 | 6.00 | 10.00 |
| | | 12 | ಚಿಕ್ಕಬಳ್ಳಾಪುರ | 25.00 | 16.00 | 6.00 | 10.00 |
| 7 | ದಾವಣಗೆರೆ | 13 | ದಾವಣಗೆರೆ | 16.00 | 16.00 | 6.00 | 10.00 |
| 8 | ಧಾರವಾಡ | 14 | ಹುಬ್ಬಳ್ಳಿ | 20.00 | 16.00 | 6.00 | 10.00 |
| | | 15 | ಧಾರವಾಡ | 22.00 | 16.00 | 8.00 | 8.00 |
| | | 16 | ಕಲಘಟಗಿ | 16.00 | 16.00 | 8.00 | 8.00 |
| 9 | ಗದಗ್ | 17 | ಮುಂಡರಗಿ | 20.00 | 16.00 | 8.00 | 8.00 |
| | | 18 | ಗದಗ | 17.50 | 16.00 | 8.00 | 8.00 |
| 10 | ಗುಲ್ಬರ್ಗ | 19 | ಆಳಂದ | 18.00 | 16.00 | 6.00 | 10.00 |
| 11 | ಹಾಸನ | 20 | ಚನ್ನರಾಯಪಟ್ಟಣ | 20.00 | 16.00 | 8.00 | 8.00 |
| | | 21 | ಸಕಲೇಶಪುರ | 19.80 | 16.00 | 6.00 | 10.00 |
| 12 | ಹಾವೇರಿ | 22 | ಹಿರೇಕೆರೂರು | 21.00 | 16.00 | 6.00 | 10.00 |
| | | 23 | ಹಾನಗಲ್ | 95.00 | 25.00 | 6.00 | 19.00 |
| 13 | ಕೋಲಾರ | 24 | ಕೋಲಾರ | 23.60 | 16.00 | 6.00 | 10.00 |
| 14 | ಕೊಪ್ಪಳ | 25 | ಕೊಪ್ಪಳ | 16.00 | 16.00 | 6.00 | 10.00 |
| | | 26 | ಗಂಗಾವತಿ | 19.75 | 16.00 | 6.00 | 10.00 |
| | | 27 | ಕುಷ್ಠಗಿ | 17.00 | 16.00 | 6.00 | 10.00 |
| | | 28 | ಯಲಬುರ್ಗಾ | 18.00 | 16.00 | 6.00 | 10.00 |
| 15 | ಮಂಡ್ಯ | 29 | ಮದ್ದೂರು | 20.00 | 16.00 | 6.00 | 10.00 |
| | | 30 | ನಾಗಮಂಗಲ | 16.00 | 16.00 | 6.00 | 10.00 |
| 16 | ಮೈಸೂರು | 31 | ಹೆಚ್.ಡಿ. ಕೋಟೆ | 17.75 | 16.00 | 6.00 | 10.00 |
| | | 32 | ಹುಣಸೂರು | 25.00 | 16.00 | 6.00 | 10.00 |
| | | 33 | ಕೆ.ಆರ್. ನಗರ | 22.00 | 16.00 | 6.00 | 10.00 |
| | | 34 | ಪಿರಿಯಾಪಟ್ಟಣ | 16.00 | 16.00 | 6.00 | 10.00 |
| 17 | ಶಿವಮೊಗ್ಗ | 35 | ಭದ್ರಾವತಿ | 20.00 | 16.00 | 8.00 | 8.00 |
| 18 | ತುಮಕೂರು | 36 | ತುಮಕೂರು | 24.00 | 16.00 | 8.00 | 8.00 |
| | | 37 | ಮಧುಗಿರಿ | 16.00 | 16.00 | 8.00 | 8.00 |
| | | 38 | ಕುಣಿಗಲ್ | 20.00 | 16.00 | 8.00 | 8.00 |
| | | 39 | ಶಿರಾ | 18.80 | 16.00 | 8.00 | 8.00 |
| | | 40 | ಪಾವಗಡ | 18.80 | 16.00 | 8.00 | 8.00 |
| | | 41 | ತಿಪಟೂರು | 20.00 | 16.00 | 8.00 | 8.00 |
| 19 | ಉತ್ತರ ಕನ್ನಡ | 42 | ಜೊಯಡಾ | 16.00 | 16.00 | 8.00 | 8.00 |
| | | 43 | ಅಂಕೋಲಾ | 19.50 | 16.00 | 8.00 | 8.00 |
| | | 44 | ಭಟ್ಕಳ | 16.00 | 16.00 | 8.00 | 8.00 |
| | | 45 | ಹಳಿಯಾಳ | 16.00 | 16.00 | 8.00 | 8.00 |
| | | 46 | ಹೊನ್ನಾವರ | 16.00 | 16.00 | 6.00 | 10.00 |
| | | 47 | ಕಾರವಾರ | 18.70 | 16.00 | 6.00 | 10.00 |
| | | 48 | ಕುಮಟಾ | 16.00 | 16.00 | 6.00 | 10.00 |
| | | 49 | ಮುಂಡಗೋಡ | 16.00 | 16.00 | 6.00 | 10.00 |
| | | 50 | ಸಿದ್ದಾಪುರ | 16.00 | 16.00 | 6.00 | 10.00 |

| 1 | 2 | 3 | | 4 | 5 | 6 | 7 |
|---|---|---|---|---|---|---|---|
| | | 51 | ಶಿರಸಿ | 17.00 | 16.00 | 6.00 | 10.00 |
| | | 52 | ಯಲ್ಲಾಪುರ | 18.50 | 16.00 | 8.00 | 8.00 |
| | **ಒಟ್ಟು** | | | **1076.10** | **841.00** | **346.00** | **495.00** |

**ಆರ್.ಕೆ. ರಾಜು**

ಪಿ.ಆರ್. 879

ಮುಖ್ಯಸ್ಥರು, ಗ್ರಾಸ್ವಯೋ
ನಿರ್ದೇಶಕರು, ಸ್ವಉಕಾ ಹಾಗೂ
ಸರ್ಕಾರದ ಪದನಿಮಿತ್ತ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ :** ವಿಕೋಪದಂತಹ ತುರ್ತು ಕಾರ್ಯಕ್ಕೆ ಉಪಯೋಗಿಸಲು ಜಿಲ್ಲಾಧಿಕಾರಿಗಳಿಗೆ ವಾಹನ ಒದಗಿಸುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರ ಅ.ಸ.ಪತ್ರ ಸಂಖ್ಯೆ: ಸಿಎಎಲ್.ಸಿ.ಆರ್. 10/08–09, ದಿನಾಂಕ: 14–5–2008.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಪ್ರಕೃತಿ ವಿಕೋಪದಂತಹ ಸಂದರ್ಭದಲ್ಲಿ ತುರ್ತು ರಕ್ಷಣಾ ಕಾರ್ಯ ಕೈಗೊಳ್ಳಲು ವಾಹನವನ್ನು ಒದಗಿಸುವಂತೆ ಬೆಂಗಳೂರು ನಗರ ಜಿಲ್ಲೆಯ ಜಿಲ್ಲಾಧಿಕಾರಿಗಳಿಂದ ಬೇಡಿಕೆ ಬಂದಿರುತ್ತದೆ.

ರಾಜ್ಯದಲ್ಲಿ ಸಂಭವಿಸುತ್ತಿರುವ ಪ್ರವಾಹ ಪರಿಸ್ಥಿತಿ ಸಂದರ್ಭದಲ್ಲಿ, ತುರ್ತು ರಕ್ಷಣಾ ಕಾರ್ಯ ಕೈಗೊಳ್ಳಲು ವಾಹನದ ಅವಶ್ಯಕತೆ ಇರುವುದನ್ನು ಸರ್ಕಾರವು ಪರಿಗಣಿಸಿ ಬೆಂಗಳೂರು ನಗರ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಒಂದು ವಾಹನವನ್ನು (4 wheelers) ಖರೀದಿಸಲು ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 311 ಟಿಎನ್‌ಆರ್ 2006, ಬೆಂಗಳೂರು, ದಿನಾಂಕ: 21ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ರಕ್ಷಣಾ ಕಾರ್ಯಕ್ಕಾಗಿ ಜಿಲ್ಲಾಧಿಕಾರಿಗಳ ಬಳಿಯಲ್ಲಿ ಲಭ್ಯವಿರುವ ಸಿ.ಆರ್.ಎಫ್. ನಿಧಿಯಿಂದ ವಿಮೆ ಹಾಗೂ ಎಲ್ಲಾ ತೆರಿಗೆಗಳೂ ಸೇರಿದಂತೆ, ರೂ. 5.50 ಲಕ್ಷಗಳ (ರೂ. ಐದು ಲಕ್ಷದ ಐವತ್ತು ಸಾವಿರಗಳು ಮಾತ್ರ) ಮಿತಿಗೆ ಒಳಪಟ್ಟು ಬೆಂಗಳೂರು ನಗರ ನೂತನ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಒಂದು ವಾಹನವನ್ನು (4 wheelers) ಈ ಕೆಳಕಂಡ ಷರತ್ತುಗಳಿಗೊಳಪಟ್ಟು, ನಿಯಮಾನುಸಾರ ಖರೀದಿಸಲು ಅನುಮೋದನೆ ನೀಡಿದೆ.

1. ಈ ವಾಹನವು all terrain, all weatherನಲ್ಲಿ ಬಳಸುವಂತಿರಬೇಕು.
2. ಈ ವಾಹನದಲ್ಲಿ ಕನಿಷ್ಠ 4–5 ಜನರಿಗೆ ಸ್ಥಳಾವಕಾಶವಿರಬೇಕು.
3. ಈ ವಾಹನವು ತುರ್ತು ಸಂದರ್ಭದಲ್ಲಿ search and rescue equipmentಗಳನ್ನು ಅಳವಡಿಸಿಕೊಂಡು ಸಾಗಿಸುವಂತಿರಬೇಕು.
4. ವಾಹನಕ್ಕೆ ತಗಲುವ ಹೆಚ್ಚುವರಿ ವೆಚ್ಚವನ್ನು ಜಿಲ್ಲಾಧಿಕಾರಿಗಳ ಸಾದಿಲ್ವಾರು ನಿಧಿಯಿಂದ ಭರಿಸುವುದು.
5. ವಾಹನದ ದುರಸ್ತಿ ವೆಚ್ಚ, ನಿರ್ವಹಣೆ, ಇಂಧನ ವೆಚ್ಚ, ಚಾಲಕರ ವೇತನ ಹಾಗೂ ಇತರೆ ಖರ್ಚು ವೆಚ್ಚಗಳನ್ನು ಜಿಲ್ಲಾಧಿಕಾರಿಗಳು ಅವರ ವಾರ್ಷಿಕ ಆಯವ್ಯಯ ಅನುದಾನದಲ್ಲಿಯೇ ಭರಿಸತಕ್ಕದ್ದು, ಸಿ.ಆರ್.ಎಫ್. ನಿಧಿಯಿಂದ ಭರಿಸುವಂತಿಲ್ಲ.
6. ವಾಹನವನ್ನು DGST ದರ ಒಪ್ಪಂದದಂತೆ ಮೇಲೆ ಸೂಚಿಸಿರುವ ಮಿತಿಗೊಳಪಟ್ಟು ಖರೀದಿಸುವುದು.
7. ಈ ವಾಹನವು ಯಾವುದೇ ವಿಕೋಪದಂತಹ ತುರ್ತು ಕಾರ್ಯಕ್ಕೆ ಉಪಯೋಗಿಸುವಂತಿರಬೇಕು.
8. ವಾಹನ ಖರೀದಿಯ ಎಲ್ಲಾ ಪ್ರಕ್ರಿಯೆಯನ್ನು ಈ ಆರ್ಥಿಕ ವರ್ಷದಲ್ಲಿಯೇ ಮುಗಿಸುವುದು.

ಈ ಅನುದಾನವನ್ನು ವೆಚ್ಚ ಮಾಡುವಾಗ ಕಾಲಕಾಲಕ್ಕೆ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆ ಹಾಗೂ ಖರೀದಿ ನಿಯಮಗಳನ್ನು ಪಾಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 867

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

**ಒಳಾಡಳಿತ ಸಚಿವಾಲಯ**

**ವಿಷಯ :** ಕರ್ನಾಟಕ ರಾಜ್ಯದಲ್ಲಿ ಸೇವೆ ಸಲ್ಲಿಸುತ್ತಿರುವ ಸೈನಿಕರ ಮತ್ತು ಮಾಜಿ ಸೈನಿಕರ ಕಲ್ಯಾಣ ಕಾರ್ಯಕ್ರಮಗಳನ್ನು ನೇರವಾಗಿ ಸ್ಪಂದಿಸುವ ಸಲುವಾಗಿ ಜಿಲ್ಲಾ ಮಟ್ಟದಲ್ಲಿ ಹಾಗೂ ಇಲಾಖಾ ಮಟ್ಟದಲ್ಲಿ ಏಕ ಗವಾಕ್ಷಿ ಸಮಿತಿಗಳನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ರವರ ಪತ್ರ ಸಂ: ಸೈಕಪುಇ/ಆಡಳಿತ/ನೋಅ/2007, ದಿನಾಂಕ 27–12–2007.

**ಪ್ರಸ್ತಾವನೆ :**

ದಿನಾಂಕ 7–12–2007ರಂದು ನಡೆದ ಕರ್ನಾಟಕ ಸರ್ಕಾರದ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಸೇವಾ ನಿರತ ಸೈನಿಕರ ಹಾಗೂ ಮಾಜಿ ಸೈನಿಕರ ಕಲ್ಯಾಣ ಕಾರ್ಯಗಳಲ್ಲಿ ಅಂದರೆ, ತರಬೇತಿ ನೇಮಕಾತಿ ಜಮೀನು ವಿವಾದ ಕುಟುಂಬ ಸಮಸ್ಯೆಗಳು ಹಾಗೂ ಇತರ ಸಮಸ್ಯೆಗಳ ತುರ್ತು ವಿಲೇವಾರಿಗಾಗಿ ಏಕ ಗವಾಕ್ಷಿ ಸಮಿತಿಯನ್ನು ಇಲಾಖಾ ಮಟ್ಟದಲ್ಲಿ ಮತ್ತು ಜಿಲ್ಲಾ ಮಟ್ಟದಲ್ಲಿ ರಚಿಸಲು ಹಾಗೂ ಸಚಿವಾಲಯದ ಮಟ್ಟದಲ್ಲಿ ಸೈನಿಕರ ಮತ್ತು ಮಾಜಿ ಸೈನಿಕರ ಕಾರ್ಯಕ್ರಮದಲ್ಲಿ ಸರ್ಕಾರವು ನೀಡುವ ಸಹಾಯ ಮತ್ತು ಸವಲತ್ತುಗಳನ್ನು ಸಕಾಲದಲ್ಲಿ ದೊರಕಿಸಿಕೊಡಲು ಪ್ರತಿಯೊಂದು ಇಲಾಖೆಯಲ್ಲಿ ಒಬ್ಬ ಸಮನ್ವಯ ಅಧಿಕಾರಿಯನ್ನು ರಚಿಸಲು ತೀರ್ಮಾನಿಸಲಾಗಿದೆ.

ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ಇವರು ದಿನಾಂಕ 27–12–2007ರಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಕರ್ನಾಟಕ ರಾಜ್ಯದ ಸೇವಾನಿರತ ಮತ್ತು ಮಾಜಿ ಸೈನಿಕರ ಮತ್ತು ಅವರ ಕುಟುಂಬದವರ ವಿವಿಧ ರೀತಿಯ ಸಮಸ್ಯೆಗಳಾದ ತರಬೇತಿ, ನೇಮಕಾತಿ, ಜಮೀನು ವಿವಾದ, ಕೋರ್ಟ್ ವಿವಾದ ಮತ್ತು ಇತರ ಸಮಸ್ಯೆಗಳನ್ನು ಅತಿ ಶೀಘ್ರವಾಗಿ ಬಗೆಹರಿಸುವ ಸಲುವಾಗಿ ಏಕ ಗವಾಕ್ಷಿ ಸಂಪರ್ಕ ಕೇಂದ್ರ (Single Window Contact Point)ವನ್ನು ಜಿಲ್ಲಾ ಮಟ್ಟದಲ್ಲಿ, ಇಲಾಖಾ ಮಟ್ಟದಲ್ಲಿ ಹಾಗೂ ರಾಜ್ಯ ಮಟ್ಟದಲ್ಲಿ ಸ್ಥಾಪಿಸಲು ಕೋರಿದ್ದಾರೆ.

ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 122 ಕಸೈಸೇ 2007, ಬೆಂಗಳೂರು, ದಿನಾಂಕ: 10ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯದಲ್ಲಿ ಸೇವೆ ಸಲ್ಲಿಸುತ್ತಿರುವ ಸೈನಿಕರ ಮತ್ತು ಮಾಜಿ ಸೈನಿಕರ ಹಾಗೂ ಅವರ ಕುಟುಂಬದವರ ವಿವಿಧ ರೀತಿಯ ಸಮಸ್ಯೆಗಳಾದ ತರಬೇತಿ ನೇಮಕಾತಿ, ಜಮೀನು ವಿವಾದ, ನ್ಯಾಯಾಲಯದ ವಿವಾದ ಮತ್ತು ಇತರ ಸಮಸ್ಯೆಗಳನ್ನು ಅತಿ ಶೀಘ್ರವಾಗಿ ಬಗೆಹರಿಸುವ ಸಲುವಾಗಿ ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಏಕ ಗವಾಕ್ಷಿ ಸಮಿತಿಯನ್ನು ಹಾಗೂ ಇಲಾಖಾ ಮಟ್ಟದಲ್ಲಿ ಏಕ ಗವಾಕ್ಷಿ ಸಮಿತಿಯನ್ನು ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ರಚಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

2) ಈ ಮೇಲೆ ಸೂಚಿಸಿರುವ ಸಮಿತಿಗಳ ಸದಸ್ಯರುಗಳ ವಿವರ ಹಾಗೂ ಈ ಸಮಿತಿಗಳು ನಿರ್ವಹಿಸುವ ಕೆಲಸ ಕಾರ್ಯಗಳ ವಿವರ ಹಾಗೂ ಇತರ ವಿಧಿ ವಿಧಾನಗಳು ಈ ಕೆಳಗಿನಂತಿರುತ್ತವೆ.

**ಜಿಲ್ಲಾ ಮಟ್ಟದ ಏಕ ಗವಾಕ್ಷಿ ಸಮಿತಿ:**

ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಏಕ ಗವಾಕ್ಷಿ ಸಮಿತಿಯನ್ನು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಚಿಸಿದೆ.

| | | |
|---|---|---|
| 1) | ಸಂಬಂಧಿತ ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2) | ಸಂಬಂಧಿತ ಜಿಲ್ಲೆಯ ಪೊಲೀಸ್ ಅಧೀಕ್ಷಕರು | ಸದಸ್ಯರು |
| 3) | ಸಂಬಂಧಿತ ತಾಲ್ಲೂಕುಗಳ ತಹಶೀಲ್ದಾರರು | ಸದಸ್ಯರು |
| 4) | ಸಂಬಂಧಿತ ಜಿಲ್ಲೆಯ ಉಪ/ಸಹ ನಿರ್ದೇಶಕರು, ಸೈನಿಕ ಕಲ್ಯಾಣ ಇಲಾಖೆ. | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಜಿಲ್ಲಾಧಿಕಾರಿಗಳು ತಮ್ಮ ಕಛೇರಿಯಲ್ಲಿನ ಕೇಂದ್ರ ಸ್ಥಾನಿಕ ಸಹಾಯಕರು ಅಥವಾ ಇನ್ನಾವುದೇ ಅಧಿಕಾರಿಯನ್ನು ನೋಡಲ್ ಅಧಿಕಾರಿಯನ್ನಾಗಿ ನೇಮಿಸತಕ್ಕದ್ದು. ಅವಶ್ಯಕತೆಗೆ ಅನುಗುಣವಾಗಿ ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಇತರ ಸರ್ಕಾರಿ ಇಲಾಖೆಗಳ ಉಪ ನಿರ್ದೇಶಕರು/ ಸಹ ನಿರ್ದೇಶಕರುಗಳನ್ನು ಸದರಿ ಸಮಿತಿಯಲ್ಲಿ ಸೇರಿಸಿಕೊಳ್ಳತಕ್ಕದ್ದು. /Co-opt ಮಾಡಿಕೊಳ್ಳತಕ್ಕದ್ದು.

**II. ಇಲಾಖಾ ಮಟ್ಟದ ಏಕ ಗವಾಕ್ಷಿ ಸಮಿತಿ:**

ಇಲಾಖಾ ಮಟ್ಟದಲ್ಲಿ ಏಕ ಗವಾಕ್ಷಿ ಸಮಿತಿಯನ್ನು ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಚಿಸಿದೆ.

| | | |
|---|---|---|
| 1) | ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ | ಅಧ್ಯಕ್ಷರು |
| 2) | ಸಹ ನಿರ್ದೇಶಕರು, (ಬೆಂಗಳೂರು ನಗರ) ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ | ಸದಸ್ಯರು |
| 3) | ಸಹ ನಿರ್ದೇಶಕರು, (ಗ್ರಾಮಾಂತರ) ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ | ಸದಸ್ಯರು |
| 4) | ಪೊಲೀಸ್ ಆಯುಕ್ತರವರಿಂದ ನಾಮನಿರ್ದೇಶಿತ ಪ್ರತಿನಿಧಿ | ಸದಸ್ಯರು |
| 5) | ಪೊಲೀಸ್ ಅಧೀಕ್ಷಕರು, ಬೆಂಗಳೂರು ಗ್ರಾಮಾಂತರ | ಸದಸ್ಯರು |
| 6) | ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು | ಸದಸ್ಯರು |
| 7) | ಜಂಟಿ ನಿರ್ದೇಶಕರು (ಕೇಂದ್ರ ಸ್ಥಾನ), ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ | ಸದಸ್ಯ ಕಾರ್ಯದರ್ಶಿ ಹಾಗೂ ನೋಡಲ್ ಅಧಿಕಾರಿ |

ಅವಶ್ಯಕತೆಗೆ ಅನುಗುಣವಾಗಿ ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಇವರು ಇತರ ಸರ್ಕಾರಿ ಇಲಾಖೆಗಳ ಅಧಿಕಾರಿಗಳನ್ನು ಸದರಿ ಸಮಿತಿಯಲ್ಲಿ ಸೇರಿಸಿಕೊಳ್ಳತಕ್ಕದ್ದು. (Co-opt ಮಾಡಿಕೊಳ್ಳತಕ್ಕದ್ದು).

**III. ರಾಜ್ಯ ಮಟ್ಟದಲ್ಲಿ ವಿಮರ್ಶನಾ ಕಾರ್ಯ:**

ರಾಜ್ಯ ಮಟ್ಟದಲ್ಲಿ ಒಳಾಡಳಿತ ಇಲಾಖೆಯ ಕಾರ್ಯದರ್ಶಿಗಳು (ಪಿಸಿಎಎಸ್) ರವರ ಅಧ್ಯಕ್ಷತೆಯಲ್ಲಿ ಆಗಿಂದಾಗ್ಗೆ ಸಭೆ ನಡೆಸಿ ಜಿಲ್ಲಾ ಮಟ್ಟದ ಹಾಗೂ ಇಲಾಖಾ ಮಟ್ಟದ ಏಕ ಗವಾಕ್ಷಿ, ಸಮಿತಿಗಳ ಕಾರ್ಯ ಪ್ರಗತಿಯನ್ನು ವಿಮರ್ಶಿಸತಕ್ಕದ್ದು.

3) ಸಚಿವಾಲಯದ ಪ್ರತಿಯೊಂದು ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯ ವರ್ಗಕ್ಕಿಂತ ಕಡಿಮೆಯಿಲ್ಲದ ಒಬ್ಬ ಅಧಿಕಾರಿಯನ್ನು ಸೇವಾ ನಿರತ ಹಾಗೂ ಮಾಜಿ ಸೈನಿಕರ ಮನವಿಗಳ ಬಗ್ಗೆ ಪರಿಶೀಲಿಸಿ, ಜಿಲ್ಲಾ ಮಟ್ಟದಲ್ಲಿನ ಹಾಗೂ ಇಲಾಖಾ ಮಟ್ಟದಲ್ಲಿನ ನೋಡಲ್ ಅಧಿಕಾರಿಗಳೊಂದಿಗೆ ಸ್ಪಂದಿಸಲು ಅನುವಾಗುವಂತೆ "ಸಮನ್ವಯ ಅಧಿಕಾರಿ (ನೋಡಲ್)" ಎಂದು ನಾಮ ನಿರ್ದೇಶನ ಮಾಡಲು ಇಲಾಖಾ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳು ಕ್ರಮ ಕೈಗೊಳ್ಳತಕ್ಕದ್ದು. ಸದರಿ ನೋಡಲ್ ಅಧಿಕಾರಿಯ ಹೆಸರು, ಅಧಿಕೃತ ವಿಳಾಸ, ದೂರವಾಣಿ ಸಂಖ್ಯೆ ಹಾಗೂ ಮೊಬೈಲ್ ಸಂಖ್ಯೆಗಳ ವಿವರಗಳನ್ನೊಳಗೊಂಡಂತೆ ಒಂದು ಅಧಿಕೃತ ಜ್ಞಾಪನವನ್ನು ಹೊರಡಿಸಿ ಅದರ ಪ್ರತಿಯನ್ನು ಒಳಾಡಳಿತ ಇಲಾಖೆಗೆ ಕಳುಹಿಸತಕ್ಕದ್ದು.

4) ಮೇಲಿನಂತೆ ರಚಿಸಲಾದ ಏಕ ಗವಾಕ್ಷಿ ಸಮಿತಿಗಳು ಕೆಳಕಂಡ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

1) ಜಿಲ್ಲಾ ಮಟ್ಟದಲ್ಲಿನ ಸಮಿತಿಯ ನೋಡಲ್ ಅಧಿಕಾರಿಯು ಆಯಾ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಕಾರ್ಯ ನಿರತ ಸೈನಿಕರು ಮತ್ತು ಮಾಜಿ ಸೈನಿಕರು ತಮ್ಮ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಸಲ್ಲಿಸಿದ ಮನವಿಗಳನ್ನು ಸ್ವೀಕರಿಸಿ, ಸದರಿ ಮನವಿಗಳ ಮೇಲೆ ಕೂಡಲೇ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು. ತಿಂಗಳಿಗೊಂದು ಬಾರಿ ಸಮಿತಿಯು ಸಭೆಯನ್ನು ನಡೆಸಿ, ಪ್ರತಿಯೊಂದು ಮನವಿಯ ಬಗ್ಗೆ ತೆಗೆದುಕೊಂಡಿರುವ ಕ್ರಮದ ಬಗ್ಗೆ ಹಾಗೂ ಬಾಕಿ ಇರುವ ಮನವಿಗಳ ಬಗ್ಗೆ ಪರಿಶೀಲನೆ ನಡೆಸಿ, ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಸೂಚನೆಗಳನ್ನು ನೀಡತಕ್ಕದ್ದು.

2) ಇಲಾಖಾ ಮಟ್ಟದ ಸಮಿತಿಯು ರಾಜ್ಯದ ಎಲ್ಲಾ ಜಿಲ್ಲೆಗಳಿಂದ ಕಾರ್ಯನಿರತ ಮತ್ತು ಮಾಜಿ ಸೈನಿಕರ ವಿವಿಧ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಸ್ವೀಕರಿಸಿರುವ ಮನವಿಗಳ ಮೇಲೆ ಸಂಬಂಧಿತ ಜಿಲ್ಲಾಧಿಕಾರಿಗಳು ತೆಗೆದುಕೊಂಡ ಕ್ರಮದ ಬಗ್ಗೆ ಪ್ರತಿ ತಿಂಗಳು ಸಭೆಯನ್ನು ಕರೆದು, ಪರಿಶೀಲನೆ ನಡೆಸಿ, ಸಮಸ್ಯೆಗಳ ನಿವಾರಣೆಗೆ ಸೂಕ್ತವಾಗಿ ಸ್ಪಂದಿಸಿ, ಆಯಾ ಜಿಲ್ಲಾಧಿಕಾರಿಗಳು ಅವುಗಳ ಮೇಲೆ ತೆಗೆದುಕೊಂಡ ಕ್ರಮದ ಬಗ್ಗೆ ಸರ್ಕಾರಕ್ಕೆ ವಿವರವಾದ ಮಾಹಿತಿಯನ್ನು ತಿಂಗಳಿಗೊಮ್ಮೆ ವರದಿ ಮಾಡತಕ್ಕದ್ದು.

3) ರಾಜ್ಯ ಮಟ್ಟದಲ್ಲಿ ಆಗಿಂದಾಗ್ಗೆ ಸಭೆಯನ್ನು ನಡೆಸಿ, ಜಿಲ್ಲಾ ಮಟ್ಟದ ಹಾಗೂ ಇಲಾಖಾ ಮಟ್ಟದಲ್ಲಿ ಆಗಿರುವ ಕಾರ್ಯ ಪ್ರಗತಿಯನ್ನು ವಿಮರ್ಷಿಸತಕ್ಕದ್ದು. ಮತ್ತು ಸದರಿ ಸಭೆಯಲ್ಲಿ ಸೈನಿಕರ/ಮಾಜಿ ಸೈನಿಕರ ಸಮಸ್ಯೆಗಳಿಗೆ ತಾಲ್ಲೂಕು ಮಟ್ಟದಲ್ಲಿ ಮತ್ತು ಜಿಲ್ಲಾ ಮಟ್ಟಗಳಲ್ಲಿ ಸೂಕ್ತವಾಗಿ ಸ್ಪಂದಿಸಿ, ಅವರ ಸಮಸ್ಯೆಗಳು ನಿವಾರಣೆಗೊಂಡ ಬಗ್ಗೆ ಖಚಿತಪಡಿಸತಕ್ಕದ್ದು.

5) ಮೇಲಿನ ಅಂಶಗಳನ್ನು ಭೂಸೇನೆ, ವಾಯು ಸೇನೆ ಮತ್ತು ನೌಕಾ ಸೇನಾ ಮುಖ್ಯಸ್ಥರ ಅಡಿಯಲ್ಲಿ ಬರುವ ಎಲ್ಲಾ ಪ್ರಮುಖ ಸೇವಾ ಕಾರ್ಯಾಲಯಗಳಿಗೆ ವ್ಯಾಪಕವಾಗಿ ಪ್ರಚಾರ ಮಾಡಲು ಸಂಬಂಧಿತ ಜಿಲ್ಲಾಧಿಕಾರಿಗಳು ಹಾಗೂ

ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು ಅಗತ್ಯ ಕ್ರಮ ಕೈಗೊಳ್ಳತಕ್ಕದ್ದು, ಸೇನಾ ವಿಭಾಗದ ಮುಖ್ಯಸ್ಥರ ವಿಳಾಸವನ್ನು ಈ ಕೆಳಗೆ ನೀಡಲಾಗಿದೆ.

1) Chief of Army Staff
Integrated Headquarters
Ministry of Defence (Army)
New Delhi-110 011.

2) Chief of Naval Staff,
Integrated Headquarters
Ministry of Defence (Army)
New Delhi-110 011.

3) Chief of the Air Staff,
Air Headquarters,
New Delhi-110 011.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 262

**ಆರ್. ನಿಸಾರ್ ಅಹಮದ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸಹಾಯಕ ಸೇವೆಗಳು)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ :** ಮಂಡ್ಯ ಜಿಲ್ಲೆಯ ನಾಗಮಂಗಲದ ಸಿವಿಲ್ ಜಡ್ಜ್ (ಹಿ.ವಿ.) ವಸತಿ ಗೃಹಗಳ ನಿರ್ಮಾಣಕ್ಕೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ಉಚ್ಚ ನ್ಯಾಯಾಲಯದ ಉಪ ನಿಬಂಧಕರ ಪತ್ರದ ಸಂಖ್ಯೆ: ಎಲ್‌ಸಿಬಿಎಸ್ 75/2005, ದಿನಾಂಕ 1–2–2008.

**ಪ್ರಸ್ತಾವನೆ :**

ಉಪನಿಬಂಧಕರು, ಕರ್ನಾಟಕ ಉಚ್ಚ ನ್ಯಾಯಾಲಯ, ಇವರು ಮೇಲೆ ಓದಲಾದ ಪತ್ರದಲ್ಲಿ ಮಂಡ್ಯ ಜಿಲ್ಲೆಯ ನಾಗಮಂಗಲದ ಸಿವಿಲ್ ಜಡ್ಜ್ (ಹಿರಿಯ ವಿಭಾಗ), ಇವರ ವಸತಿ ಗೃಹಗಳ ನಿರ್ಮಾಣಕ್ಕಾಗಿ ಲೋಕೋಪಯೋಗಿ ಇಲಾಖೆಯು ರೂ. 24 ಲಕ್ಷಗಳ ಅಂದಾಜು ಯೋಜನೆಗಳನ್ನು ಸಿದ್ದಪಡಿಸಿದ್ದು, ಪ್ರಸ್ತುತ ಆಯವ್ಯಯದ 2007–08ನೇ ಸಾಲಿನ ಅಪೆಂಡಿಕ್ಸ್–ಇ ನಲ್ಲಿ ಮೂಲ ಅಂದಾಜುಗಳ ರೂ. 10 ಲಕ್ಷಗಳನ್ನು ಒದಗಿಸಲಾಗಿದೆಯೆಂದು ಕೇಂದ್ರ ಪುರಸ್ಕೃತ ಯೋಜನೆ ಅಡಿಯಲ್ಲಿ ರೂ. 3 ಲಕ್ಷಗಳ ಅನುದಾನವನ್ನು ಒದಗಿಸಿರುವುದರಿಂದ, ಆಯವ್ಯಯದಲ್ಲಿ ಒದಗಿಸಲಾಗಿರುವ ಮೂಲ ಅಂದಾಜುಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಆ ಮೇರೆಗೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 119 ಎಲ್‌ಸಿಇ 2007, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2007**

ಮಂಡ್ಯ ಜಿಲ್ಲೆಯ ನಾಗಮಂಗಲದ ಸಿವಿಲ್ ಜಡ್ಜ್ (ಹಿರಿಯ ವಿಭಾಗ), ಇವರ ವಸತಿ ಗೃಹಗಳನ್ನು ರೂ. 10 (ಹತ್ತು ಲಕ್ಷ ರೂಪಾಯಿಗಳು) ಲಕ್ಷಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಇದನ್ನು ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 317

**ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಹೊಸಪೇಟೆ ಇವರನ್ನು ಅಮಾನತ್ತುಗೊಳಿಸುವ ಕುರಿತು.

**ಓದಲಾಗಿದೆ :**
1) ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ, ಇವರ ಪತ್ರ ಸಂಖ್ಯೆ: ಕಂ/ಗಣಿ/111/2007–08, ದಿನಾಂಕ: 11–02–2008.
2) ಆಯುಕ್ತರು ಮತ್ತು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಪತ್ರ ಸಂಖ್ಯೆ: ಗಭೂಇ.ಸಿಬ್ಬಂದಿ.ಅ.3: 2007–08: 3019, ದಿನಾಂಕ 11–2–2008.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರದ ಸ್ವಾಯತ್ತ ಸಂಸ್ಥೆಯಾದ ಮೈಸೂರು ಮಿನರಲ್ಸ್ ಲಿ., ಇವರು ಹೊಸಪೇಟೆ ತಾಲ್ಲೂಕಿನ ಜಂಬೂನಾಥನ ಹಳ್ಳಿ, ಅರಣ್ಯ ಪ್ರದೇಶದಲ್ಲಿ 38.456 ಹೆಕ್ಟೇರ್ ಪ್ರದೇಶದಲ್ಲಿ ಹೊಂದಿರುವ ಗಣಿಗುತ್ತಿಗೆ ಸಂಖ್ಯೆ: 1659ರ

ಪ್ರದೇಶವನ್ನು ಮೆ: ಆರ್.ಬಿ.ಎಸ್.ಎಸ್.ಎನ್. ರವರು ಒತ್ತುವರಿ ಮಾಡಿ ಗಣಿಗಾರಿಕೆ ಮಾಡುತ್ತಿರುವುದಾಗಿ ಎಂ.ಎಂ.ಎಲ್. ಸಂಸ್ಥೆಯ ವ್ಯವಸ್ಥಾಪಕರು ದೂರನ್ನು ನೀಡಿದ್ದರೂ ಸಹ ಯಾವುದೇ ಕ್ರಮವನ್ನು ತೆಗೆದುಕೊಳ್ಳದೇ, ಹೊಸಪೇಟೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಉಪ ನಿರ್ದೇಶಕರಾದ ಶ್ರೀ ಎಸ್.ಪಿ. ರಾಜು, ಇವರು ಮೆ: ಆರ್.ಬಿ.ಎಸ್.ಎಸ್.ಎನ್. ಇವರು ಅನಧಿಕೃತವಾಗಿ ಗಣಿಗಾರಿಕೆ ಮಾಡಲು ಪರೋಕ್ಷವಾಗಿ ಸಹಕರಿಸಿರುತ್ತಾರೆಂದು ಹಾಗೂ ಇದರಿಂದಾಗಿ, ಸರ್ಕಾರಿ ಸಂಸ್ಥೆಗೆ ಕೋಟ್ಯಾಂತರ ರೂಪಾಯಿ ನಷ್ಟ ಉಂಟಾಗಿರುವುದು ಸ್ಪಷ್ಟವಾಗಿರುತ್ತದೆಂದು ಹಾಗೂ ದಿ: 12–12–2007ರಂದು ಹೊಸಪೇಟೆ ತಾಲ್ಲೂಕಿನ ಕಮಲಾಪುರ ಹೋಬಳಿ ವ್ಯಾಪ್ತಿಯ ದರೋಜಿ ಕರಡಿಧಾಮದ ಹತ್ತಿರ ಸಂಭವಿಸಿದ ಕಲ್ಲು ಗಣಿ ಸ್ಫೋಟದಿಂದಾಗಿ ಇಬ್ಬರು ಮೃತಪಟ್ಟಿದ್ದು, ಈ ಕುರಿತು ವರದಿಯನ್ನು ನೀಡುವಂತೆ ದೂರವಾಣಿ ಮೂಲಕ ಸೂಚಿಸಿದ್ದು, ಸದರಿ ಪ್ರದೇಶದಲ್ಲಿ ಯಾವುದೇ ಕಲ್ಲುಗಣಿ ಚಟುವಟಿಕೆಗಳು ನಡೆಯುತ್ತಿರುವುದು ಕಂಡು ಬಂದಿಲ್ಲವೆಂದು ದಿಕ್ಕು ತಪ್ಪಿಸುವ ಹಾಗೂ ಅಸಮರ್ಪಕ ವರದಿಯನ್ನು ನೀಡಿರುತ್ತಾರೆ ಮತ್ತು ಕರಡಿಧಾಮಕ್ಕೆ ಒಳಪಡುವ ಅರಣ್ಯ ಪ್ರದೇಶಗಳಲ್ಲಿ ಅವಧಿ ಮುಗಿದಿರುವ ನಾಲ್ಕು ಕಲ್ಲು ಗಣಿ ಗುತ್ತಿಗೆಗಳನ್ನು ನವೀಕರಣ ಮಾಡಬಾರದೆಂದು ಮತ್ತು ಉಳಿದ ಎರಡು ಕಲ್ಲು ಗಣಿ ಗುತ್ತಿಗೆಗಳ ಅನುಮತಿಯನ್ನು ಹಿಂದಕ್ಕೆ ಪಡೆಯಬೇಕೆಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ಸಂರಕ್ಷಣೆ ಉಪವಿಭಾಗ, ರಾಣೆಬೆನ್ನೂರು, ಇವರು ಕೋರಿದ್ದರೂ ಸಹ ತಕ್ಷಣ ಕ್ರಮ ಕೈಗೊಳ್ಳದೇ ಅನಗತ್ಯ ಪತ್ರ ವ್ಯವಹಾರವನ್ನು ಮಾಡುತ್ತಾ, ಕಾಲಹರಣ ಮಾಡಿರುತ್ತಾರೆ. ಆದ್ದರಿಂದ, ಹೊಸಪೇಟೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಉಪ ನಿರ್ದೇಶಕರಾದ ಶ್ರೀ ಎಸ್.ಪಿ. ರಾಜು, ಇವರ ವಿರುದ್ಧ ಶಿಸ್ತಿನ ಕ್ರಮವನ್ನು ತೆಗೆದುಕೊಳ್ಳುವಂತೆ, ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಅಂತೆಯೇ, ಜಿಲ್ಲಾಧಿಕಾರಿಗಳ ವರದಿಯನ್ನಾಧರಿಸಿ ಅಧಿಕಾರಿಯ ವಿರುದ್ಧ ಶಿಸ್ತಿನ ಕ್ರಮವನ್ನು ಜರುಗಿಸಲು ಆಯುಕ್ತರು ಮತ್ತು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಕೂಡ ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 8 ಎಂಜಿಎಸ್ 2008, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಶ್ರೀ ಎಸ್.ಪಿ. ರಾಜು ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಹೊಸಪೇಟೆ ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ)ರ ಪ್ರಕಾರ, ಶ್ರೀ ಎಸ್.ಪಿ. ರಾಜು ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಹೊಸಪೇಟೆ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಎಸ್.ಪಿ. ರಾಜು, ಇವರು ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಸ್.ಪಿ. ರಾಜು, ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯವರ ಲಿಖಿತ ಅನುಮತಿ ಪಡೆಯದೆ, ಕೇಂದ್ರ ಕಾರ್ಯಸ್ಥಾನ ಬಿಡತಕ್ಕದ್ದಲ್ಲ.

ಶ್ರೀ ಎಸ್.ಪಿ. ರಾಜು, ಇವರ ಅಮಾನತ್ತಿನಿಂದ ತೆರವಾದ ಹುದ್ದೆಗೆ ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಳ್ಳಾರಿ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧಿಕ ಪ್ರಭಾರದಲ್ಲಿರಿಸಿ ಆದೇಶಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 350

**ಎಲ್.ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ (ಗಣಿ) (ಪ್ರ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಸಚಿವಾಲಯ ಗ್ರಂಥಾಲಯ**

**ವಿಷಯ :** ಸಚಿವಾಲಯ ಗ್ರಂಥಾಲಯಕ್ಕೆ ಕೊಠಡಿ ಸಂಖ್ಯೆ 11ರಲ್ಲಿ ಅಗತ್ಯ ಕಾಮಗಾರಿಗಳನ್ನು ಮಾಡಿಸಲು ತಗಲುವ ವೆಚ್ಚಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಕಾರ್ಯದರ್ಶಿ, ಸಿಆಸುಇ ಇವರ ಅಧ್ಯಕ್ಷತೆಯಲ್ಲಿ ದಿನಾಂಕ 20–8–07ರಂದು ನಡೆದ ಸಭೆಯ ನಡವಳಿಗಳು.
2) ದಿನಾಂಕ 3–9–07ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 273 ಡಿಬಿಎಂ 2005, ದಿನಾಂಕ 16–10–07.
4) ಅಧೀಕ್ಷಕ ಅಭಿಯಂತರರು, ಕಟ್ಟಡಗಳ ವೃತ್ತ, ಬೆಂಗಳೂರು ಇವರ ಪತ್ರದ ಸಂಖ್ಯೆ ಅ:ಕವೃ:ಎಇ1: 07–08/4664–65, ದಿನಾಂಕ 26–10–07.

5) ದಿನಾಂಕ 27–10–07ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.
6) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸಗ್ರಇ 2007, ದಿನಾಂಕ 22–12–07.
7) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 81 ಅಸಪ 2007, ದಿನಾಂಕ 16–1–2008.
8) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಸಗ್ರಇ 2007, ದಿನಾಂಕ 28–1–2008.
9) ಕಾರ್ಯಪಾಲಕ ಅಭಿಯಂತರರ ಪತ್ರ ಸಂಖ್ಯೆ: ಕಾಪಾಅ: ನಂ.1 ಕ.ವಿ:ಎಇ 2: 563–65, ವಿಸೌ: ಗ್ರಂಥಾಲಯ 07–08, ದಿನಾಂಕ 18–2–08.

**ಪ್ರಸ್ತಾವನೆ :**

ವಿಧಾನಸೌಧ ಕೊಠಡಿ ಸಂಖ್ಯೆ 11ರಲ್ಲಿ ಸಚಿವಾಲಯ ಗ್ರಂಥಾಲಯವನ್ನು ಸ್ಥಾಪಿಸುವ ಬಗ್ಗೆ ಕಾಮಗಾರಿಗಾಗಿ ಅಂದಾಜುಗಳ ಪಟ್ಟಿಯನ್ನು ಕಳುಹಿಸಿದ ರೂ. 1.54 ಕೋಟಿ (ರೂಪಾಯಿಗಳು ಒಂದು ಕೋಟಿ ಐವತ್ನಾಲ್ಕು ಲಕ್ಷಗಳು ಮಾತ್ರ) ವೆಚ್ಚದ ಅಂದಾಜು ಮೊತ್ತಕ್ಕೆ ಈಗಾಗಲೇ ಆಡಳಿತಾತ್ಮಕ ಅನುಮೋದನೆ ಹಾಗೂ ಮೇಲು ರುಜುವನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆ.ಸು.) ರವರು ಮಾಡಿ ಕಾರ್ಯಪಾಲಕ ಅಭಿಯಂತರರವರಿಗೆ ಹಿಂದಿರುಗಿಸಲಾಗಿರುತ್ತದೆ. ಈ ಬಗ್ಗೆ ರೂ. 1.54 ಕೋಟಿ (ರೂಪಾಯಿಗಳು ಒಂದು ಕೋಟಿ ಐವತ್ನಾಲ್ಕು ಲಕ್ಷಗಳು ಮಾತ್ರ) ಮೊತ್ತವನ್ನು ಠೇವಣಿಯಾಗಿ ಕಾರ್ಯಪಾಲಕ ಅಭಿಯಂತರರು, ನಂ.1 ಕಟ್ಟಡಗಳ ವಿಭಾಗ, ಬೆಂಗಳೂರು ಇವರಿಗೆ ನೀಡಲಾಗಿದೆ.

ಪ್ರಸ್ತುತ, ಈಗಾಗಲೇ ಸಲ್ಲಿಸಿದ 13 ಅಂದಾಜುಗಳನ್ನು ಕ್ರೋಢೀಕರಿಸಿ ಒಂದೇ ಅಂದಾಜನ್ನು ರೂ. 1.54 ಕೋಟಿ (ರೂಪಾಯಿಗಳು ಒಂದು ಕೋಟಿ ಐವತ್ನಾಲ್ಕು ಲಕ್ಷಗಳು ಮಾತ್ರ) ಮೊತ್ತಕ್ಕೆ ತಯಾರಿಸಿ ಸದರಿ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಉಲ್ಲೇಖ (9)ರಲ್ಲಿ ಕಾರ್ಯಪಾಲಕ ಅಭಿಯಂತರರು, ನಂ.1 ಕಟ್ಟಡಗಳ ವಿಭಾಗ, ಬೆಂಗಳೂರು ಇವರು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಸಗಇ 2007, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2008**

ಕರ್ನಾಟಕ ಸರ್ಕಾರ ಸಚಿವಾಲಯ ಗ್ರಂಥಾಲಯವನ್ನು ಕೊಠಡಿ ಸಂಖ್ಯೆ 11ರಲ್ಲಿ ಸ್ಥಾಪಿಸುವ ಕಾಮಗಾರಿಯ ಬಗ್ಗೆ ಬಿಡುಗಡೆ ಮಾಡಿದ ಮೊತ್ತ ರೂ. 1.54 ಕೋಟಿಗಳಿಗೆ (ರೂಪಾಯಿಗಳು ಒಂದು ಕೋಟಿ ಐವತ್ನಾಲ್ಕು ಲಕ್ಷಗಳು ಮಾತ್ರ) ಈಗಾಗಲೇ ಸಲ್ಲಿಸಿದ 13 ಅಂದಾಜು ಪಟ್ಟಿಗಳ ಬದಲು ಕ್ರೋಢೀಕೃತ ಒಂದೇ ಅಂದಾಜು ಪಟ್ಟಿಯನ್ನು ಮೇಲುರುಜು ಮಾಡಿ, ಸದರಿ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: FD 1 TFP 2002, ದಿನಾಂಕ 20–1–2003ರ ಐಟಂ ಸಂಖ್ಯೆ 46ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 360

**ಡೇನಿಯಲ್ ಬರೆಟ್ಟೊ**

ಮುಖ್ಯ ಗ್ರಂಥಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಸಚಿವಾಲಯ ಗ್ರಂಥಾಲಯ

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ಶ್ರೀ ಮೊಹ್ಮದ್ ಶಫಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಚಿಂಚೋಳಿ ಇವರ ಮೇಲೆ ಶಿಸ್ತು ಕ್ರಮ ಬಾಕಿ ಇಟ್ಟು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ – ಆದೇಶ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂ: ಮುಇಂ:ಪಂರಾಇಂ:ಇ:ಸಿ–12:ಸಕಾಇಂ:2007–08/175, ದಿನಾಂಕ 27–2–2008.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ ಇವರು ಸರ್ಕಾರಕ್ಕೆ ವರದಿ ಮಾಡುತ್ತಾ, ಚಿಂಚೋಳಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಜಿ.ಬಿ. ನಾಗನೂರು, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ದಿನಾಂಕ 9–1–2008ರಿಂದ ರಜೆಯ ಮೇಲೆ ತೆರಳಿರುವುದರಿಂದ ವೃತ್ತ ಕಛೇರಿಯ ಶ್ರೀ ಪ್ರಭಾಕರ ಗೊಬ್ಬೂರ, ಸಹಾಯಕ ಇಂಜಿನಿಯರ್‌ರವರ ಸೇವೆಯನ್ನು ಪಡೆದು ಚಿಂಚೋಳಿ ಉಪ ವಿಭಾಗದ ಸಹಾಯಕ ಕಾರ್ಯಪಾಲಕ ಅಭಿಯಂತರರ ಪ್ರಭಾರವನ್ನು ಕಾರ್ಯಪಾಲಕ ಅಭಿಯಂತರರು ವಹಿಸಿರುತ್ತಾರೆ. ತದನಂತರ, ಕಾರ್ಯಪಾಲಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಗುಲ್ಬರ್ಗಾರವರು ಶ್ರೀ ಪ್ರಭಾಕರ ಗೊಬ್ಬೂರ, ಸಹಾಯಕ ಇಂಜಿನಿಯರ್‌ರವರ ಸೇವೆಯನ್ನು ಹಿಂದಿರುಗಿಸಿ ದಿನಾಂಕ 11–2–2008ರಿಂದ ಉಪ ವಿಭಾಗದಲ್ಲಿರುವ ಮೊಹ್ಮದ್ ಶಫಿ ಕಿರಿಯ ಇಂಜಿನಿಯರ್‌ರವರಿಗೆ ಪ್ರಭಾರ

ವಹಿಸಿರುತ್ತಾರೆ. ಶ್ರೀ ಜಿ.ಬಿ. ನಾಗನೂರು ರವರು ದಿನಾಂಕ 13–2–2008ರಂದು ರಜೆಯಿಂದ ಮರಳಿ ಕಛೇರಿಗೆ ಹಾಜರಾದಾಗ ಶ್ರೀ ಮೊಹ್ಮದ್ ಶಫಿ, ಕಿರಿಯ ಇಂಜಿನಿಯರ್ ರವರಿಗೆ ಪ್ರಭಾರ ಹಸ್ತಾಂತರಿಸಲು ನಿರಾಕರಿಸಿರುವುದಾಗಿ ಅಧೀಕ್ಷಕ ಅಭಿಯಂತರರು ವರದಿ ಮಾಡಿದ್ದಾರೆ. ಈವರೆವಿಗೆ ಉಪವಿಭಾಗ ಕಛೇರಿಯಲ್ಲಿ ಶ್ರೀ ಜಿ.ಬಿ. ನಾಗನೂರು ಹಾಗೂ ಶ್ರೀ ಮೊಹ್ಮದ್ ಶಫಿ, ಇಬ್ಬರೂ ಸಹಾಯಕ ಕಾರ್ಯಪಾಲಕ ಇಂಜಿನಿಯರೆಂದು ಕೆಲಸ ನಿರ್ವಹಿಸಲು ಪೈಪೋಟಿ ನಡೆಸಿದ್ದಾರೆ. ಇದರಿಂದಾಗಿ ಅಭಿವೃದ್ಧಿ ಕಾರ್ಯಗಳು ಕುಂಠಿತಗೊಂಡಿರುತ್ತದೆ. ಶ್ರೀ ಜಿ.ಬಿ. ನಾಗನೂರುರವರು ರಜೆಯ ಮೇಲೆ ತೆರಳಿದಾಗ ಕಾರ್ಯಪಾಲಕ ಅಭಿಯಂತರರು, ಸರಿಯಾಗಿ ವಿವೇಚಿಸದೇ ಪ್ರಭಾರವನ್ನು ಅಲ್ಪಕಾಲದಲ್ಲಿ ಬದಲಾಯಿಸಿದ್ದಾರೆ. ಶ್ರೀ ಜಿ.ಬಿ. ನಾಗನೂರುರವರು ರಜೆಯಿಂದ ಹಿಂದಿರುಗಿದಾಗ ಅವರಿಗೆ ಅಧಿಕಾರ ಹಸ್ತಾಂತರಿಸಲು ಸರಿಯಾಗಿ ಸೂಚನೆ ನೀಡಿದಂತೆ ಕಂಡು ಬಂದಿರುವುದಿಲ್ಲ. ಅಧೀಕ್ಷಕ ಅಭಿಯಂತರರಿಂದ ವರದಿ ಬಂದ ಕೂಡಲೇ ಕಾರ್ಯಪಾಲಕ ಅಭಿಯಂತರರವರನ್ನು ಸಂಪರ್ಕಿಸಲು ಪ್ರಯತ್ನಿಸಿದಾಗ ಅವರು ರಜೆಯಲ್ಲಿರುವುದಾಗಿ ತಿಳಿದು ಬಂದಿರುತ್ತದೆ. ವಿಭಾಗದ ಅಧೀಕ್ಷಕರು ಈ ಬಗ್ಗೆ ಸರಿಯಾದ ವಿವರಣೆ ನೀಡಿರುವುದಿಲ್ಲ ಮತ್ತು ಸಂಜೆಯೊಳಗೆ ವರದಿ ನೀಡುವುದಾಗಿ ತಿಳಿಸಿದ್ದು, ವರದಿಯನ್ನು ನೀಡಿರುವುದಿಲ್ಲ. ಇದಕ್ಕಿಂತ ಹೆಚ್ಚಾಗಿ ಶ್ರೀ ಮೊಹ್ಮದ್ ಶಫಿ ರವರು ಪ್ರಭಾರ ಹಸ್ತಾಂತರ ಮಾಡದಿರುವುದು ಅತಿರೇಖವಾಗಿದೆ. ಆದ್ದರಿಂದ ಶ್ರೀ ಜಿ.ಬಿ. ನಾಗನೂರುರವರಿಗೆ ಕೂಡಲೇ ಪ್ರಭಾರವನ್ನು ಹಸ್ತಾಂತರಿಸಲು ಸೂಚನೆ ನೀಡಬೇಕೆಂದು ಮತ್ತು ಶ್ರೀ ಮೊಹ್ಮದ್ ಶಫಿರವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಪ್ರಸ್ತಾಪಿಸಿರುತ್ತಾರೆ.

ಸರ್ಕಾರವು ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ವರದಿಯನ್ನು ಪರಿಶೀಲಿಸಿ ಶ್ರೀ ಮೊಹ್ಮದ್ ಶಫಿ ಕಿರಿಯ ಇಂಜಿನಿಯರ್ ಇವರು ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ತೀವ್ರ ಸ್ವರೂಪದ ಅಶಿಸ್ತು, ಕರ್ತವ್ಯಲೋಪ ಮತ್ತು ನಿರ್ಲಕ್ಷತನವೆಸಗಿರುವುದು ಕಂಡು ಬಂದಿರುವುದರಿಂದ ಇವರ ವಿರುದ್ಧ ಶಿಸ್ತಿನ ಕ್ರಮವನ್ನು ಕೈಗೊಳ್ಳುವುದನ್ನು ಬಾಕಿ ಇರಿಸಿ ಶ್ರೀ ಮೊಹ್ಮದ್ ಶಫಿ ಇವರನ್ನು ಅಮಾನತ್ತಿನಲ್ಲಿಡಲು ಸರ್ಕಾರವು ನಿರ್ಣಯಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 40 ಜಿಪಅ 2008, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ 10ನೇ ನಿಯಮದ 1(ಡಿ) ಉಪ–ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮೊಹ್ಮದ್ ಶಫಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಚಿಂಚೋಳಿ, ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು, ಇವರನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಮೊಹ್ಮದ್ ಶಫಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಚಿಂಚೋಳಿ ಇವರಿಗೆ ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಮೊಹ್ಮದ್ ಶಫಿ, ಕಿರಿಯ ಇಂಜಿನಿಯರ್, ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ತಮ್ಮ ಕಛೇರಿ ಇರುವ ಸ್ಥಳವನ್ನು ಬಿಡತಕ್ಕದ್ದಲ್ಲ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 432

**ಎಸ್.ಯು. ಶಿವಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು ಬಿ),
ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ :** ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳಿಗೆ ಅಗತ್ಯ ವಸ್ತುಗಳ ಪೂರೈಕೆಗೆ ಮಂಜೂರಾತಿ.

**ಓದಲಾಗಿದೆ :**
1) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರದ ಸಂಖ್ಯೆ: ಜಿ.ಓ.ಬಿ. 184 ಮತ್ತು 185/200/ ದಿನಾಂಕ 4–9–2007.
2) ಸರ್ಕಾರಿ ಆದೇಶ ಸಂಖ್ಯೆ: ಲಾ 210 ಎಲ್‌ಸಿಇ 2007 (ಭಾಗ 1 ಮತ್ತು 2), ದಿನಾಂಕ 27–9–2007.
3) ಸರ್ಕಾರಿ ಆದೇಶ ಸಂಖ್ಯೆ: ಲಾ 210 ಎಲ್‌ಸಿಇ 2004 (ಭಾ–1 ಮತ್ತು ಭಾ–2), ದಿನಾಂಕ 29–9–2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ರಾಮನಗರ ಮತ್ತು ಚಿಕ್ಕಬಳ್ಳಾಪುರ ಹೊಸ ಜಿಲ್ಲೆಗಳಿಗೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಸಿಬ್ಬಂದಿ ಸೃಜಿಸುವ ಬಗ್ಗೆ. ಸದರಿ ನ್ಯಾಯಾಲಯಗಳಿಗೆ ಅಗತ್ಯವಿರುವ ಪೀಠೋಪಕರಣಗಳು, ದೂರವಾಣಿ,

ಯಂತ್ರೋಪಕರಣಗಳು, ಗಣಕಯಂತ್ರಗಳು, ಲೇಖನ ಸಾಮಗ್ರಿಗಳು, ರಿಜಿಸ್ಟ್ರಾರ್‌ಗಳು ರೆಜಿಟ್ ಕಛೇರಿಗೆ ಬೇಕಾಗುವ ಮೊಹರುಗಳು ಹಾಗೂ ಬೆಲಿಫ್ಸ್ ಮತ್ತು ಪ್ರೋಸೆಸ್ ಸರ್ವರ್‌ಗಳ ಹುದ್ದೆಗಳು, ಸರ್ಕಾರಿ ವಕೀಲರ ಹಾಗೂ ಸರ್ಕಾರಿ ಪ್ಲೀಡರ್ ಹುದ್ದೆಗಳ ಸೃಜಿಸಲು ಮಂಜೂರಾತಿ ಕೋರಿ ಪ್ರಸ್ತಾವನೆ ಸಲ್ಲಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ಸಿಬ್ಬಂದಿಯನ್ನು ಸೃಜಿಸಲಾಗಿದೆ. ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮರು ಪದನಾಮಗೊಳಿಸಿ ರಾಮನಗರ ಮತ್ತು ಚಿಕ್ಕಬಳ್ಳಾಪುರ ಸಿವಿಲ್ ಜಡ್ಜ್ (ಹಿ.ವಿ.) ಹಾಗೂ ಜೆ.ಎಂ.ಎಫ್.ಸಿ. ನ್ಯಾಯಾಲಯವನ್ನು ಸಿವಿಲ್ ಜಡ್ಜ್ (ಹಿ.ವಿ.) ಮತ್ತು ಸಿ.ಜೆ.ಎಂ. ನ್ಯಾಯಾಲಯಗಳೆಂದು ಪದನಾಮಗೊಳಿಸಿ ಆದೇಶಿಸಿದೆ. ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಸದರಿ ನ್ಯಾಯಾಲಯಗಳಿಗೆ ಜಿಲ್ಲಾ ಸರ್ಕಾರಿ ವಕೀಲರ ಹುದ್ದೆಗಳನ್ನು ಸೃಜಿಸಲಾಗಿದೆ.

ಈ ಹಿನ್ನಲೆಯಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 210 ಎಲ್‌ಸಿಇ 2007, ಬೆಂಗಳೂರು, ದಿನಾಂಕ: 10ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ರಾಮನಗರ ಮತ್ತು ಚಿಕ್ಕಬಳ್ಳಾಪುರದ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳಿಗೆ ಅಗತ್ಯವಿರುವ ಪೀಠೋಪಕರಣಗಳು, ದೂರವಾಣಿ, ಬೆರಳಚ್ಚುಯಂತ್ರ, ಜೆರಾಕ್ಸ್ ಯಂತ್ರ, ಗಣಕಯಂತ್ರ, ಫ್ಯಾಕ್ಸ್ ಯಂತ್ರ, ಹವಾನಿಯಂತ್ರಿತ ಅಂಬಾಸೀಡರ್ ಕಾರ್ ಇತ್ಯಾದಿಗಳನ್ನು ಸ್ಟಾಂಡರ್ಡ್ ಸ್ಕೇಲಿಗೆ ಅನುಗುಣವಾಗಿ ನಿಯಮಾನುಸಾರ ಖರೀದಿಸಲು ಮಂಜೂರಾತಿ ನೀಡಿದೆ.

ಸದರಿ ನ್ಯಾಯಾಲಯಗಳಿಗೆ ಅಗತ್ಯವಾಗಿ ಬೇಕಾಗಿರುವ ಲೇಖನ ಸಾಮಾಗ್ರಿಗಳು, ನಮೂನೆಗಳು, ರಿಜಿಸ್ಟಾರ್‌ಗಳು, ಮೊಹರುಗಳು ಕರ್ನಾಟಕ ಸರ್ಕಾರಿ ಗೆಜೆಟ್ ವಗೈರೆಯನ್ನು ಸರ್ಕಾರಿ ಮುದ್ರಣಾಲಯದಿಂದ ಪಡೆದುಕೊಳ್ಳತಕ್ಕದ್ದು.

ಮೇಲೆ ಓದಲಾದ ಕ್ರಮಾಂಕ (3)ರ ಸರ್ಕಾರದ ಆದೇಶಗಳಲ್ಲಿ ಹೊಸದಾಗಿ ಸ್ಥಾಪಿಸಲಾಗಿರುವ ರಾಮನಗರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿಕ್ಕಬಳ್ಳಾಪುರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳಿಗೆ ಮಂಜೂರಾಗಿರುವ ಪ್ರೋಸಸ್ ಸಿಬ್ಬಂದಿಯ ಜೊತೆಗೆ ರಾಮನಗರ ಮತ್ತು ಚಿಕ್ಕಬಳ್ಳಾಪುರ ಸಿವಿಲ್ ಜಡ್ಜ್ (ಹಿ.ವಿ.) ನ್ಯಾಯಾಲಯಗಳ ಸಿಬ್ಬಂದಿ ಲೆಕ್ಕದಲ್ಲಿರುವ ಬೇಲಿಫ್ ಮತ್ತು ಪ್ರೋಸಸ್ ಸರ್ವರ್ ಹುದ್ದೆಗಳನ್ನು ನೂತನವಾಗಿ ಸ್ಥಾಪಿಸಲಾದ ಜಿಲ್ಲಾ ನ್ಯಾಯಾಲಯಗಳಿಗೆ ಸ್ಥಳಾಂತರಿಸಲು ಮಂಜೂರಾತಿ ನೀಡಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 232

**ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ಪರಿಶೀಲಿಸಲು ರಚಿಸಲಾಗಿರುವ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ಪುನರ್ ರಚಿಸುವ ಕುರಿತು.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂ: ಸನೀಇ 158 ಮಸಾವಿ 2004, ದಿನಾಂಕ 30–11–2006 ಮತ್ತು ದಿನಾಂಕ: 2–2–2007.
2) ದಿ: 27–11–2007ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂ: ಮುಸದ/ತಾಸ–1/ಸಇಂ–3/168/ 2007/6847.

**ಪ್ರಸ್ತಾವನೆ :**

ಸಣ್ಣ ನೀರಾವರಿಯ ಅಂದಾಜು ಪಟ್ಟಿಗಳನ್ನು ಪರಿಶೀಲಿಸಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ರಚಿಸಲಾಗಿದೆ. ಸದರಿ ಸಮಿತಿಯ ಅವಧಿಯು ದಿನಾಂಕ 30–11–2007ಕ್ಕೆ ಮುಕ್ತಾಯಗೊಂಡಿರುತ್ತದೆ. ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಅಭಿಯಂತರರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸದರಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು 02 ವರ್ಷಗಳ ಅವಧಿಗೆ ಮುಂದುವರಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಸಮಿತಿಯನ್ನು ಪುನರ್ ರಚಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 166 ಮಸಾವಿ 2007, ಬೆಂಗಳೂರು, ದಿನಾಂಕ: 21ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ಪರಿಶೀಲಿಸಲು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡಂತೆ ತಕ್ಷಣದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಪುನರ್ ರಚಿಸಲಾಗಿದೆ.

**ಅಧಿಕಾರೇತರ ಸದಸ್ಯರು :**

| | | |
|---|---|---|
| 1. | ಶ್ರೀ ಎಸ್.ಜೆ. ಚನ್ನಬಸಪ್ಪ, ಸರ್ಕಾರದ ಕಾರ್ಯದರ್ಶಿ (ನಿವೃತ್ತ) ಜಲಸಂಪನ್ಮೂಲ ಇಲಾಖೆ | ಅಧ್ಯಕ್ಷರು |
| 2. | ಶ್ರೀ ಸಿ.ಎನ್. ಬಾಬು, ಮುಖ್ಯ ಇಂಜಿನಿಯರ್ (ನಿವೃತ್ತ) | ಸದಸ್ಯರು |
| 3. | ಶ್ರೀ ಆರ್. ಬಸವನಗೌಡ, ಮುಖ್ಯ ಇಂಜಿನಿಯರ್ (ನಿವೃತ್ತ) | ಸದಸ್ಯರು |
| 4. | ಶ್ರೀ ಬಸವರಾಜ್ ಕುಕುಂದಾ, ಮುಖ್ಯ ಇಂಜಿನಿಯರ್ (ನಿವೃತ್ತ) | ಸದಸ್ಯರು |
| 5. | ಪ್ರೊ: ರಾಮಪ್ರಸಾದ್ (ನಿವೃತ್ತ) ಪ್ರೊಫೆಸರ್, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು | ಸದಸ್ಯರು |
| | **ಅಧಿಕಾರಿ ಸದಸ್ಯರು:** | |
| 1. | ಪ್ರಧಾನ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ | ಸದಸ್ಯರು |
| 2. | ನಿರ್ದೇಶಕರು, ಕೆ.ಇ.ಆರ್.ಎಸ್. ಕೃಷ್ಣರಾಜಸಾಗರ | ಸದಸ್ಯರು |
| 3. | ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ ಲೋಕೋಪಯೋಗಿ ಇಲಾಖೆ (ಆರ್ಥಿಕ ಕೋಶ), ವಿಧಾನಸೌಧ | ಸದಸ್ಯರು |
| 4. | ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ | ಸದಸ್ಯರು |
| 5. | ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

ಈ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಅಧಿಕಾರೇತರ ಅಧ್ಯಕ್ಷರು ಹಾಗೂ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂ: ಸನೀಇ 28 ಮಸಾವಿ 2004, ದಿನಾಂಕ 24–9–2007ರಂತೆ ಉಪಸ್ಥಿತಿ ಭತ್ಯೆ ಮತ್ತು ಸರ್ಕಾರಿ ಆದೇಶ ಸಂ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ 3–2–2001ರಂತೆ ಪ್ರಯಾಣ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 142

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ವಿಶೇಷ ಕೋಶದ ತಾತ್ಕಾಲಿಕ ಹುದ್ದೆಗಳ ಮುಂದುವರಿಕೆ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 91 ಸಸಿವಿ 06 ದಿನಾಂಕ 3–2–2007.

2) ಕಂದಾಯ ಇಲಾಖೆಯ ಕಡತ ಸಂಖ್ಯೆ: ಕಂಇ 113 ವಿಕೋವಿ 2007.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 3–2–2007ರ ಸರ್ಕಾರದ ಆದೇಶದಲ್ಲಿ ಕಂದಾಯ ಇಲಾಖೆಯ ವಿಶೇಷ ಕೋಶದ ಈ ಕೆಳಕಂಡ ಹುದ್ದೆಗಳನ್ನು ದಿ: 31–12–2007ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿತ್ತು.

| ಕ್ರಮ ಸಂಖ್ಯೆ | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಅಧೀನ ಕಾರ್ಯದರ್ಶಿ (ವಿಶೇಷ ಕೋಶ) | 1 (ಒಂದು) |
| 2 | ಹಿರಿಯ ಸಹಾಯಕ | 1 (ಒಂದು) |
| 3 | ಸಹಾಯಕ | 1 (ಒಂದು) |
| 4 | ಕಿರಿಯ ಸಹಾಯಕ | 1 (ಒಂದು) |
| 5 | ಬೆರಳಚ್ಚುಗಾರರು | 1 (ಒಂದು) |
| 6 | ದಲಾಯತ್ | 1 (ಒಂದು) |
| 7 | ಚಾಲಕ | 1 (ಒಂದು) |
| | **ಒಟ್ಟು ಹುದ್ದೆಗಳು** | **7 (ಏಳು)** |

ಮೇಲೆ (2)ರಲ್ಲಿ ಓದಲಾದ ಕಂದಾಯ ಇಲಾಖೆಯ ಕಡತದಲ್ಲಿ ಮೇಲ್ಕಂಡ ಏಳು ಹುದ್ದೆಗಳನ್ನು ದಿ: 1–1–2008ರಿಂದ ಮತ್ತೆ ಒಂದು ವರ್ಷದ ಅವಧಿಯವರೆಗೆ ಮುಂದುವರಿಸುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 713 ಸಅಸೇ 2007, ಬೆಂಗಳೂರು, ದಿನಾಂಕ: 4ನೇ ಜನವರಿ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ವಿಶೇಷ ಕೋಶದ ಮೇಲ್ಕಂಡ ಏಳು ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 1–1–2008ರಿಂದ ಜಾರಿಗೆ ಬರುವಂತೆ ದಿನಾಂಕ 31–12–2008ರವರೆಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 76

**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ಸೇವೆಗಳು–3)

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ದಿ: 3–11–05 ರಿಂದ 30–8–06ರವರೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** 1) ಅಧಿಸೂಚನೆ ಸಂಖ್ಯೆ: ಸಿಆಸುಇ 571 ಎಸ್‌ಎಎಸ್ 06, ದಿನಾಂಕ 9–2–2007.
2) ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 366 ಎಸ್‌ಎಎಸ್ 07, ದಿನಾಂಕ 23–7–2007.

**ಪ್ರಸ್ತಾವನೆ :**

ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ 23–7–2007ರ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀ ಎಂ.ಜಿ. ಹಾಲಪ್ಪನವರ್, ಐ.ಎ.ಎಸ್., (ನಿವೃತ್ತಿ) ಇವರ ವೇತನವನ್ನು ನಿಗಧಿಪಡಿಸಲು ಅನುವಾಗುವಂತೆ ಸದರಿ ಅಧಿಕಾರಿಯವರು ಆ ಸಮಯದಲ್ಲಿ ಕಾರ್ಯನಿರ್ವಹಿಸಿದ ಸರ್ಕಾರದ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಕೃಷಿ ಮತ್ತು ತೋಟಗಾರಿಕೆ ಇಲಾಖೆ ಹುದ್ದೆಯನ್ನು ದಿನಾಂಕ: 3–11–05 ರಿಂದ ದಿನಾಂಕ 30–8–2006 ರವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ), ಕೃಷಿ ಮತ್ತು ತೋಟಗಾರಿಕೆ ಹುದ್ದೆಗೆ ಉನ್ನತೀಕರಿಸುವಂತೆ ಮಹಾಲೇಖಪಾಲರು ತಿಳಿಸಿರುವುದಾಗಿ, ಅದರಂತೆ ಉನ್ನತೀಕರಿಸುವ ಆದೇಶವನ್ನು ಹೊರಡಿಸುವಂತೆ ಕೋರಿದ್ದಾರೆ. ಅದರಂತೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 46 ಸಸಿವಿ 2007, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2007**

ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ), ಕೃಷಿ ಮತ್ತು ತೋಟಗಾರಿಕೆ ಇಲಾಖೆ ಹುದ್ದೆಗೆ ಶ್ರೀ ಎಂ.ಜಿ. ಹಾಲಪ್ಪನವರ್, ಐ.ಎ.ಎಸ್., ಇವರು ಕಾರ್ಯನಿರ್ವಹಿಸಿದ ಅವಧಿ ದಿನಾಂಕ 3–11–2005 ರಿಂದ 30–8–2006ರವರೆಗೆ ಉನ್ನತೀಕರಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 77

**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ಸೇವೆಗಳು–3)

**ಸಹಕಾರ ಸಚಿವಾಲಯ**

**ವಿಷಯ :** ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಚುಂಚನಕಟ್ಟೆ, ಕೆ.ಆರ್. ನಗರ ತಾಲ್ಲೂಕು, ಮೈಸೂರು ಜಿಲ್ಲೆ ಇದರ ವಿಶೇಷಾಧಿಕಾರಿಗಳ ಅಧಿಕಾರದ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಸಇ 97 ಸಸಕಾ 2006, ದಿನಾಂಕ 6–9–2006.
2) ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರವರ ದಿ: 24–1–08ರ ಡಿಎಸ್‌ಕೆ/ಇಎಸ್‌ಟಿಎಸ್/36/ 04–05 ಸಂಖ್ಯೆಯ ಪತ್ರ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಸರ್ಕಾರದ ಆದೇಶದ ಮೂಲಕ ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಚುಂಚನಕಟ್ಟೆ, ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ ಇದರ ವಿಶೇಷಾಧಿಕಾರಿಗಳ ಅಧಿಕಾರದ ಅವಧಿಯನ್ನು ದಿನಾಂಕ 10–1–2006 ರಿಂದ 9–1–2007ರ ವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 31(1)ಕ್ಕೆ ತಿದ್ದುಪಡಿ ಮಾಡಿ ಆದೇಶ ಹೊರಡಿಸಲಾಗಿರುತ್ತದೆ.

ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು 22 ವರ್ಷಗಳ ಅವಧಿಗೆ ಮೆ: ಅಂಬಿಕಾ ಶುಗರ್ಸ್, ಚೆನ್ನೈ ಅವರಿಗೆ ಗುತ್ತಿಗೆ ನೀಡಿದ್ದು ಗುತ್ತಿಗೆ ಕರಾರು/ನಿಬಂಧನೆ ರೀತ್ಯ ಕಾರ್ಖಾನೆಯ ಕಬ್ಬು ಅರೆಯುವ ಕಾರ್ಯಗಳು, ಇತ್ಯಾದಿ, ಗುತ್ತಿಗೆದಾರರಿಂದಲೇ ನಿರ್ವಹಿಸಲ್ಪಡುತ್ತಿರುವುದರಿಂದ, ಗುತ್ತಿಗೆ ಕರಾರು ಪಾಲನೆ ಮತ್ತು ಕಾರ್ಖಾನೆಯು ಕಾಲಕಾಲಕ್ಕೆ ಪಡೆಯುವ ಗುತ್ತಿಗೆ ಬಾಡಿಗೆ ಹಣವನ್ನು ಸದ್ವಿನಿಯೋಗ ಮಾಡುವ ಕೆಲಸ ಮಾತ್ರವಿರುವುದರಿಂದ ಕಾರ್ಖಾನೆಯ ವಿಶೇಷಾಧಿಕಾರಿಗಳ ಅವಧಿಯನ್ನು ದಿನಾಂಕ: 10–1–2007 ರಿಂದ ಕಾರ್ಖಾನೆಯನ್ನು ಗುತ್ತಿಗೆ ನೀಡಿರುವ ಅವಧಿಯವರೆಗೆ, ಅಂದರೆ 22 ವರ್ಷಗಳವರೆಗೆ (ದಿನಾಂಕ 31–3–2029), ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 31(1) ಹಾಗೂ 121 ಅವಕಾಶಗಳನ್ವಯ ವಿಸ್ತರಿಸಿ ಆದೇಶ ಹೊರಡಿಸುವಂತೆ ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು ಉಲ್ಲೇಖ (2)ರ ತಮ್ಮ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರವರ ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 19 ಸಸಕಾ 2008, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿನ ವಿವರಣೆಗಳ ಹಿನ್ನೆಲೆಯಲ್ಲಿ ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿ, ಚುಂಚನಕಟ್ಟೆ, ಕೆ.ಆರ್. ನಗರ ತಾಲ್ಲೂಕು, ಮೈಸೂರು ಜಿಲ್ಲೆ, ಇದರ ವಿಶೇಷಾಧಿಕಾರಿಗಳ ಅವಧಿಯನ್ನು ದಿನಾಂಕ 10–1–2007 ರಿಂದ 22 ವರ್ಷಗಳ ಅವಧಿಗೆ ಅಂದರೆ ದಿನಾಂಕ 31–3–2029ರವರೆಗೆ, ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಧಿನಿಯಮ ಕಲಂ 31(1)ರ ಉಪಬಂಧಗಳಿಗೆ ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಚುಂಚನಕಟ್ಟೆ, ಕೆ.ಆರ್. ನಗರ ತಾಲ್ಲೂಕು, ಈ ಸಂಘಕ್ಕೆ ಅನ್ವಯವಾಗುವಂತೆ ಮಾರ್ಪಾಡು ಮಾಡಲಾಗಿದೆಯೆಂದು ಈ ಮೂಲಕ ಆದೇಶಿಸಲಾಗಿದೆ.

**ಕಲಂ 31(1):** ಕಲಂ 31(1)ರಲ್ಲಿ ಹೇಳಿರುವ "ಒಂದು ವರ್ಷ" ಎಂಬ ಪದಗಳ ಬದಲಾಗಿ "264 ತಿಂಗಳು" ಎಂದು ಓದಿಕೊಳ್ಳತಕ್ಕದ್ದು.

**ಸೂಚನೆ:**

ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ಅನ್ವಯವಾಗುವಂತೆ ಮಾಡಿರುವ ಅಧಿನಿಯಮ ಕಲಂ 31(1)ರ ಮಾರ್ಪಾಡು ದಿನಾಂಕ 31–3–2029ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಕಲಂ 31(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 420

**ಸಿ. ಶ್ರೀನಿವಾಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ಎ.ಕೆ. ಸೋಮಣ್ಣ, ನಿವೃತ್ತ ಅಪರ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿ ಕ್ರಮ ಕೈಗೊಳ್ಳುವ ಬಗ್ಗೆ –ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 190 ಎಸ್‌ಇಎನ್ 2006, ಬೆಂಗಳೂರು, ದಿನಾಂಕ: 2ನೇ ಜನವರಿ 2008**

ಶ್ರೀ ಎ.ಕೆ. ಸೋಮಣ್ಣ, ನಿವೃತ್ತ ಅಪರ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ದಿನಾಂಕ 28–12–2005ರಂದು 3–00 ಗಂಟೆಗೆ ನಡೆಯಲಿದ್ದ ಬಿ.ಎಂ.ಐ.ಸಿ.ಪಿ. ಸಭೆಗೆ ಹಾಜರಾಗಲು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಇವರು ಆದೇಶಿಸಿದ್ದರೂ ಸಭೆಗೆ ಹಾಜರಾಗದೆ ಇದ್ದು ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯ ರಿಟ್ ಅಪೀಲ್ ಸಂಖ್ಯೆ 1543: 2005 (ಎಲ್‌ಎ) – ಕೆ.ಐ.ಎ.ಡಿ.ಬಿ. – ಕರ್ನಾಟಕ – ವಿರುದ್ಧ ಮೆ: ನಂದಿ ಇನ್‌ಪ್ರಾಸ್ಟ್ರಕ್ಚರ್ ಕಾರಿಡಾರ್ ಎಂಟರ್‌ಪ್ರೈಸಸ್, ಈ ರಿಟ್ ಅರ್ಜಿಗೆ ಸಂಬಂಧಿಸಿದಂತೆ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಮುಂದೆ ಎಸ್.ಎಲ್.ಪಿ. ಸಲ್ಲಿಸಲು ವ್ಯಾಜ್ಯ ನಿರ್ವಹಣಾಧಿಕಾರಿ ಹಾಗೂ ಪ್ರಮಾಣಿಕರಿಸುವ ಅಧಿಕಾರಿಯೆಂದು ದಿನಾಂಕ 6–10–2005 ಹಾಗೂ 21–11–2005ರ ಸೇರ್ಪಡೆ ಆದೇಶದಲ್ಲಿ ಆದೇಶಿಸಿದ್ದರೂ ಸಹ ಪ್ರಮಾಣ ಪತ್ರ ಸಲ್ಲಿಸಲು ನಿರಾಕರಿಸಿ ಕರ್ನಾಟಕ ನಾಗರೀಕ ಸೇವಾ ನಿಯಮ (ನಡತೆ) ನಿಯಮ 3(1)(3)ನ್ನು ಉಲ್ಲಂಘಿಸಿ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಎ.ಕೆ. ಸೋಮಣ್ಣ, ನಿವೃತ್ತ ಅಪರ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎ.ಕೆ. ಸೋಮಣ್ಣ, ನಿವೃತ್ತ ಅಪರ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 11, 11(ಎ)ರಲ್ಲಿ ನಿಗಧಿಪಡಿಸಿದ ಕಾರ್ಯ ವಿಧಾನವನ್ನು ಅನುಸರಿಸಬೇಕೆಂದು ಸರ್ಕಾರವು ಈ ಮೂಲಕ ಆದೇಶಿಸುತ್ತದೆ.

ಈ ವಿಚಾರಣೆಯಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11(ಎ)ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 80

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಸತಿ ಸಚಿವಾಲಯ**

**ವಿಷಯ :** ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಧ್ಯಕ್ಷರು ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ ಇವರನ್ನು ಸಮಗ್ರ ವಸತಿ ಮತ್ತು ಕೊಳಚೆ ಅಭಿವೃದ್ಧಿ ಕಾರ್ಯಕ್ರಮ (IHSDP) ಅಧಿಕಾರಯುಕ್ತ ಸಮಿತಿಗೆ ಅಧ್ಯಕ್ಷರನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ವಇ 24 ಕೊಮಂಲೆ 2007, ದಿನಾಂಕ 4–8–2007.

2) ಸಿಆಸುಇ ಅಧಿಸೂಚನೆ ಸಂಖ್ಯೆ: ಡಿಪಿಎಆರ್/45/ಎಸ್‌ಎಎಸ್/2008, ದಿನಾಂಕ 6–2–2008.

**ಪ್ರಸ್ತಾವನೆ :**

ಭಾರತ ಸರ್ಕಾರದ ನೂತನ ಯೋಜನೆ ನರ್ಮ್ ಯೋಜನೆಯ ಸಮಗ್ರ ವಸತಿ ಮತ್ತು ಕೊಳಚೆ ಅಭಿವೃದ್ಧಿ ಯೋಜನೆ IHSDP ಯನ್ನು ರಾಜ್ಯದಲ್ಲಿ ಸುಗಮವಾಗಿ ಅನುಷ್ಠಾನಗೊಳಿಸುವ ಸಲುವಾಗಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಅಧಿಕಾರಯುಕ್ತ ಸಮಿತಿಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ರಚಿಸಲಾಗಿತ್ತು.

| | |
|---|---|
| ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ | ಅಧ್ಯಕ್ಷರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ವಸತಿ ಇಲಾಖೆ | ಸದಸ್ಯರು |
| ಸರ್ಕಾರದ ಕಾರ್ಯದರ್ಶಿಗಳು,<br>ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| ಸರ್ಕಾರದ ಕಾರ್ಯದರ್ಶಿಗಳು,<br>ಹಣಕಾಸು ಇಲಾಖೆ (ವೆಚ್ಚ) | ಸದಸ್ಯರು |
| ಜಂಟಿ ನಿರ್ದೇಶಕರು (ಯೋಜನೆ)<br>ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| ಯೋಜನೆಗೆ ಸಂಬಂಧಿಸಿದ ಅಧಿಕಾರಿಗಳು | |
| ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ | ಸದಸ್ಯ–ಕಾರ್ಯದರ್ಶಿ |

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅಧಿಸೂಚನೆಯಲ್ಲಿ ಶ್ರೀಮತಿ ನೀರಜಾ ರಾಜಕುಮಾರ್, ಐಎಎಸ್, ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಗಳು ಇವರನ್ನು ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ, ಬೆಂಗಳೂರು ಇದರ ಅಧ್ಯಕ್ಷರನ್ನಾಗಿ ನೇಮಿಸಲಾದ ಕಾರಣ, ಸದರಿಯವರು ಐಹೆಚ್‌ಎಸ್‌ಡಿಪಿ ಯೋಜನೆಯ ಅಧಿಕಾರಯುಕ್ತ ಸಮಿತಿಯ ಅಧ್ಯಕ್ಷರೂ ಆಗಿರುವುದರಿಂದ ಮತ್ತು ಈ ಕ್ರಮವನ್ನು ಸಚಿವ ಸಂಪುಟದ ಅನುಮೋದನೆ ಮೇರೆಗೆ ಕೈಗೊಂಡಿರುವುದರಿಂದ ಶ್ರೀಮತಿ ನೀರಜಾ ರಾಜಕುಮಾರ್, ಅಧ್ಯಕ್ಷರು ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ, ಬೆಂಗಳೂರು ಇವರನ್ನು ಐಹೆಚ್‌ಎಸ್‌ಡಿಪಿ ಯೋಜನೆಯ ಅಧಿಕಾರಯುಕ್ತ ಸಮಿತಿಗೆ ಅಧ್ಯಕ್ಷರನ್ನಾಗಿಯೂ ನೇಮಿಸುವ ಪ್ರಸ್ತಾವನೆಯನ್ನು ಕಾರ್ಯಕಾರಿ ಸಮಿತಿಯ ಅನುಮೋದನೆಗಾಗಿ ಸಲ್ಲಿಸಲಾಯಿತು.

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 24 ಕೊಮಂಲೆ 2007, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2008**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀಮತಿ ನೀರಜಾ ರಾಜಕುಮಾರ್, ಐಎಎಸ್, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಇವರನ್ನು ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ, ಬೆಂಗಳೂರು ಇದರ

ಅಧ್ಯಕ್ಷರನ್ನಾಗಿ ನೇಮಿಸಲಾದ ಕಾರಣ, ಸದರಿಯವರು ಐಹೆಚ್‌ಎಸ್‌ಡಿಪಿ ಯೋಜನೆಯ ಅಧಿಕಾರಯುಕ್ತ ಸಮಿತಿಯ ಅಧ್ಯಕ್ಷರೂ ಆಗಿರುವುದರಿಂದ ಮತ್ತು ಈ ಕ್ರಮವನ್ನು ಸಚಿವ ಸಂಪುಟದ ಅನುಮೋದನೆ ಮೇರೆಗೆ ಕೈಗೊಂಡಿರುವುದರಿಂದ ಶ್ರೀಮತಿ ನೀರಜಾ ರಾಜಕುಮಾರ್, ಅಧ್ಯಕ್ಷರು ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ, ಬೆಂಗಳೂರು ಇವರನ್ನು ಐಹೆಚ್‌ಎಸ್‌ಡಿಪಿ ಯೋಜನೆಯ ಅಧಿಕಾರಯುಕ್ತ ಸಮಿತಿಗೆ ಅಧ್ಯಕ್ಷರನ್ನಾಗಿಯೂ ನೇಮಿಸುವ ಪ್ರಸ್ತಾವನೆಗೆ ಕಾರ್ಯಕಾರಿ ಸಮಿತಿ ಸಭೆ ದಿನಾಂಕ 1–3–2008ರಂದು ಅನುಮೋದಿಸಿರುವುದರಿಂದ ಈ ಕೆಳಕಂಡಂತೆ ಐಹೆಚ್‌ಎಸ್‌ಡಿಪಿ ಯೋಜನೆಯ ಅಧಿಕಾರಯುಕ್ತ ಸಮಿತಿಯನ್ನು ಮುಂದಿನ ಆದೇಶದವರೆಗೆ ರಚಿಸಲಾಗಿದೆ.

| | |
|---|---|
| ಶ್ರೀಮತಿ ನೀರಜಾ ರಾಜಕುಮಾರ್, ಐಎಎಸ್<br>ಅಧ್ಯಕ್ಷರು, ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ, ಬೆಂಗಳೂರು | ಅಧ್ಯಕ್ಷರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಸತಿ ಇಲಾಖೆ | ಸದಸ್ಯರು |
| ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| ಸರ್ಕಾರದ ಕಾರ್ಯದರ್ಶಿಗಳು,<br>ಹಣಕಾಸು ಇಲಾಖೆ (ವೆಚ್ಚ) | ಸದಸ್ಯರು |
| ಜಂಟಿ ನಿರ್ದೇಶಕರು (ಯೋಜನೆ)<br>ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| ಯೋಜನೆಗೆ ಸಂಬಂಧಿಸಿದ ಅಧಿಕಾರಿಗಳು | |
| ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ | ಸದಸ್ಯ–ಸಮಾವೇಶಕ<br>(Member-Convenor) |

ಈ ಆದೇಶವನ್ನು ಕಾರ್ಯಕಾರಿ ಸಮಿತಿ ಸಭೆ ಸಂಖ್ಯೆ: ಇಸಿಸಿ, 58/2008, ದಿನಾಂಕ 1–3–2008ರ ಆದೇಶದ ಮೇರೆಗೆ ಹೊರಡಿಸಲಾಗಿದೆ.

ಭಾರತ ಸರ್ಕಾರದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 421

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ

**ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ವಿಷಯ :** ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ 2007–08ನೇ ಸಾಲಿನಲ್ಲಿ ಮೂರನೇ ಕಂತಾಗಿ ರೂ. 528.75 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಯೋಇ 25 ಮಪ್ರಮಂ 2007, ದಿನಾಂಕ 23–6–2007.
2) ಸರ್ಕಾರಿ ಆದೇಶ ಸಂಖ್ಯೆ: ಯೋಇ 25 ಮಪ್ರಮಂ 2007, ದಿನಾಂಕ 31–12–2007.

**ಪ್ರಸ್ತಾವನೆ :**

2007–08ನೇ ಸಾಲಿನಲ್ಲಿ ಮಲೆನಾಡು ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಲೆಕ್ಕಶೀರ್ಷಿಕೆ "2515–00–800–0–05–101(ಸಹಾಯನುದಾನ) (ಯೋಜನೆ)" ಅಡಿಯಲ್ಲಿ ರೂ. 2115.00 ಲಕ್ಷಗಳನ್ನು ಹಾಗೂ ಲೆಕ್ಕಶೀರ್ಷಿಕೆ "2515–00–800–0–05–436 (ನಬಾರ್ಡ್ ಕಾಮಗಾರಿಗಳು) (ಯೋಜನೆ)" ಅಡಿಯಲ್ಲಿ ರೂ. 300.00 ಲಕ್ಷಗಳನ್ನು ಒಟ್ಟು ರೂ. 2415.00 ಲಕ್ಷಗಳನ್ನು ಒದಗಿಸಿದ್ದು, ಇದರಲ್ಲಿ ಮಂಡಳಿಗೆ ಮೊದಲನೇ ಕಂತಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ 23–6–2007ರ ಆದೇಶದಲ್ಲಿ ರೂ. 603.25 ಲಕ್ಷಗಳನ್ನು ಹಾಗೂ ಮೇಲೆ (2)ರಲ್ಲಿ ಓದಲಾದ ದಿನಾಂಕ 31–12–2007ರ ಆದೇಶದಲ್ಲಿ ಎರಡನೇ ಕಂತಾಗಿ ರೂ. 528.25 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಈಗ ಮೂರನೇ ಕಂತಾಗಿ ರೂ. 528.75 ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 25 ಮಪ್ರಮಂ 2007, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2008**

2007–08ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಮೂರನೇ ಕಂತಾಗಿ ಲೆಕ್ಕಶೀರ್ಷಿಕೆ "2515–00–800–0–05–101 (ಸಹಾಯಾನುದಾನ) (ಯೋಜನೆ)" ಅಡಿಯಲ್ಲಿ ರೂ. 528.75 ಲಕ್ಷಗಳನ್ನು (ಐದು ನೂರ ಇಪ್ಪತ್ತೆಂಟು ಲಕ್ಷ ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

ಈಗ ಬಿಡುಗಡೆಯಾದ ಮೊತ್ತವನ್ನು ಮಂಡಳಿಯ ವೈಯಕ್ತಿಕ ಖಾತೆಯಲ್ಲಿ ಮೊದಲು ಇಟ್ಟು ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು. ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು 2007–08ರ ಅಂತ್ಯದೊಳಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 199 ವೆಚ್ಚ–7/2008, ದಿನಾಂಕ 1–3–2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 425

**ಎಂ.ಆರ್. ಮಹೇಶ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**ಸಹಕಾರ ಸಚಿವಾಲಯ**

**ವಿಷಯ :** ದಿ ಮಾರ್ಕಂಡೇಯ ಕೋ–ಆಪರೇಟೀವ್ ಶುಗರ್ ಮಿಲ್ಸ್ ಲಿಮಿಟೆಡ್, ಕಾಕತಿ ಬೆಳಗಾವಿ, ಇದರ ವಾರ್ಷಿಕ ಸಾಮಾನ್ಯ ಸಭೆಯನ್ನು ನಡೆಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1) ಅಧ್ಯಕ್ಷರು, ದಿ ಮಾರ್ಕಂಡೇಯ ಕೋ–ಆಪರೇಟೀವ್ ಶುಗರ್ ಮಿಲ್ಸ್ ಲಿಮಿಟೆಡ್, ಕಾಕತಿ, ಬೆಳಗಾಂ ಇವರ ದಿನಾಂಕ 19–2–2008ರ ಸಂಖ್ಯೆ: ಎಂಸಿಎಸ್ಎಂ/ವಾ.ಮ. ಸಭೆ–2006–07/2007–08/379ರ ಪತ್ರ.

**ಪ್ರಸ್ತಾವನೆ :**

ದಿ ಮಾರ್ಕಂಡೇಯ ಕೋ–ಆಪರೇಟೀವ್ ಶುಗರ್ ಮಿಲ್ಸ್ ಲಿಮಿಟೆಡ್, ಕಾಕತಿ, ಬೆಳಗಾಂ ಜಿಲ್ಲೆ, ಇದರ 2006–07ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ 30–9–2007ರೊಳಗಾಗಿ ನಡೆಸಬೇಕಾಗಿದ್ದು ಕಾರಣಾಂತರಗಳಿಂದ ಇದನ್ನು ದಿನಾಂಕ 31–3–2008ರೊಳಗಾಗಿ ನಡೆಸಲು ಸಹಕಾರ ಸಂಘಗಳ ಸಂಯುಕ್ತ ಆಯುಕ್ತರು ಹಾಗೂ ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರ ಕೇಂದ್ರಸ್ಥಾನಿಕ ಸಹಾಯಕರು ಅನುಮತಿ ನೀಡಿರುತ್ತಾರೆಂದೂ, ಈಗ ಕಾರ್ಖಾನೆಯ ಸಿವಿಲ್ ಕಾಮಗಾರಿಗಳು, ಯಂತ್ರೋಪಕರಣಗಳ ಸರಬರಾಜು ಮತ್ತು ಜೋಡಣೆ ಕಾರ್ಯಗಳು ಭರದಿಂದ ಸಾಗಿದ್ದು ಘಟಕವನ್ನು 2008–09ರಲ್ಲಿ ಪ್ರಾರಂಭಿಸುವ ದೃಷ್ಟಿಯಿಂದ ಕಾರ್ಖಾನೆಯ ಆಡಳಿತ ಮಂಡಳಿ ಮತ್ತು ಸಿಬ್ಬಂದಿ ವರ್ಗದವರು ಕಾರ್ಯಮಗ್ನರಾಗಿರುವುದರಿಂದ ಮತ್ತು ಇತರ ಕಾರಣಗಳಿಂದ ಸಂಘದ ವಾರ್ಷಿಕ ಸಾಮಾನ್ಯ ಸಭೆಯನ್ನು ನಡೆಸಲು ದಿನಾಂಕ 31–3–2008ರ ಬದಲು 30–9–2008ರೊಳಗೆ ನಡೆಸಲು ಸರ್ಕಾರದ ಅನುಮತಿಯನ್ನು ನೀಡುವಂತೆ, ದಿ ಮಾರ್ಕಂಡೇಯ ಕೋ–ಆಪರೇಟಿವ್ ಶುಗರ್ ಮಿಲ್ಸ್ ಲಿಮಿಟೆಡ್‌ನ ಅಧ್ಯಕ್ಷರು ಉಲ್ಲೇಖ (1)ರ ಪತ್ರದಲ್ಲಿ ಕೋರಿರುತ್ತಾರೆ.

ಈ ಪ್ರಸ್ತಾವೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 24 ಸಸಕಾ 2008, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ದಿ ಮಾರ್ಕಂಡೇಯ ಕೋ–ಆಪರೇಟಿವ್ ಶುಗರ್ಸ್ ಮಿಲ್ಸ್ ಲಿಮಿಟೆಡ್, ಕಾಕತಿ, ಬೆಳಗಾಂ ಜಿಲ್ಲೆ, ಇದರ 2006–07ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು 30–9–2008ರೊಳಗೆ ನಡೆಸಲು ಅನುವಾಗುವಂತೆ ಈ ಸಂಘಕ್ಕೆ ಅಧಿನಿಯಮದ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟುಗಳೊಂದಿಗೆ ಅನ್ವಯವಾಗುತ್ತವೆ ಎಂದು ಆದೇಶಿಸುತ್ತದೆ, ಎಂದರೆ–

**27ರ ಪ್ರಕರಣ:**

ಪ್ರಕರಣದ 27(1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ –"ಹನ್ನೆರಡು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಟು ದಿನಾಂಕ 30–9–2008 ರವರೆಗೆ ಜಾರಿಯಲ್ಲಿದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 428

**ಸಿ. ಶ್ರೀನಿವಾಸ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

**HORTICULTURE SECRETARIAT**

**Sub :** "Karnataka State Horticulture Mission Agency" –Secretary, Horticulture to be the Chairman.

**Ref :**
1. Government Order No. AHD 99 HPP 2005, dated 16-6-2005.
2. D.O. Letter No. 33-8/2005-Hort. dated 11-9-2006 from Secretary, Agriculture Government of India.
3. D.O. letter No. 33-80/2007-Hort. dated 27-8-2007 from Secretary, Agriculture Government of India.

**Preamble:**

Karnataka State Horticulture Mission Agency has been registered on 30-6-2005 under the Karnataka Societies Registration Act 1960 for providing integrated, end-to-end approach in planning and implementation of National Horticulture Mission programmes and to act as the nodal point for receiving funds from Government of India, in accordance with the Government Order read at (1) above.

Government of India had been insisting that there is a need to have a mechanism for more intensive review of the mission programmes for giving pace to implementing the programme in the State vide letters read at (2) and (3) above.

In order to simplify the rules and procedures under National Horticulture Mission and to provide more assistance to the farmers, it is now decided to reconstitute the State Executive Committee of the Karnataka State Horticulture Mission Agency and to appoint Secretary, Horticulture as Chairman in place of the Minister for Horticulture.

Hence, this order.

**Government Order No. AHD 38 HPP 2007, Bangalore, Dated 14th February 2008**

Government is pleased to reconstitute the State Executive Committee of the Karnataka State Horticulture Mission Agency as below:

| | | |
|---|---|---|
| 1 | Secretary to Government, Horticulture Department | Chairman |
| 2 | Principal Secretary to Government, Agriculture Department | Member |
| 3 | Principal Secretary/Secretary to Government, Finance Department | Member |
| 4 | Principal Secretary/ Secretary to Government, Planning and Statistics Department | Member |
| 5 | Principal Secretary/ Secretary to Government, Commerce and Industries Department | Member |
| 6 | Principal Secretary/ Secretary to Government, Co-operation Department | Member |
| 7 | Principal Secretary/ Secretary to Government, Rural Development and Panchayat Raj Department | Member |
| 8 | Principal Secretary/ Secretary to Government (Panchayat Raj), Rural Development and Panchayat Raj Department | Member |
| 9 | Vice-Chancellor, University of Agricultural Sciences, Hebbal, Bangalore | Member |
| 10 | Vice-Chancellor, University of Agricultural Sciences, Dharwad | Member |
| 11 | Director, Indian Institute of Horticultural Research, Hesarghatta, Bangalore | Member |
| 12 | Managing Director, Karnataka State Agro Produce Processing and Export Corporation, Bangalore | Member |
| 13 | Managing Director, Karnataka State Agricultural Marketing Board, Bangalore | Member |
| 14 | National Mission Director, National Horticulture Mission, New Delhi | Member |
| 15 & 16 | Two Representatives of Farmers to be nominated by the State Government | Members |
| 17 | One Representative of Farmer to be nominated by the Central Government | Member |

| | | |
|---|---|---|
| 18 & 19 | Two Representatives from entrepreneurs to be nominated by the State Government | Members |
| 20 | State Mission Director, KSHMA. | Member-Secretary |

This order comes into immediate effect.

By order and in the name of the President of India,

PR. 314

**S. RAJU**

Under Secretary to Government,
Horticulture Department.

**ಉನ್ನತ ಶಿಕ್ಷಣ ಸಚಿವಾಲಯ**

**ವಿಷಯ :** 2007–08ನೇ ಶೈಕ್ಷಣಿಕ ಸಾಲಿಗೆ ಶಿವಮೊಗ್ಗ ಜಿಲ್ಲೆ ಭದ್ರಾವತಿಯ ಡಿ.ಕೆ. ಶಿವಕುಮಾರ್, ಬಿ.ಇಡಿ., ಕಾಲೇಜಿನ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಕುರಿತು.

**ಉಲ್ಲೇಖ :** 1. ಎನ್.ಸಿ.ಟಿ.ಇ. ಪತ್ರ ಸಂಖ್ಯೆ: F.SRO/NCTE/B.Ed./2006-07/1496, ದಿನಾಂಕ 24–4–2007.
2. ಸಂಸ್ಥೆಯ ಅಧ್ಯಕ್ಷರ ಪತ್ರ ದಿನಾಂಕ 4–2–2008.

**ಪೀಠಿಕೆ :**

ಸರ್ಕಾರಿ/ವಿಶ್ವವಿದ್ಯಾಲಯ/ ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ./ಬಿ.ಇಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ./ಬಿ.ಪಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಆದೇಶದಲ್ಲಿ ಎನ್.ಸಿ.ಟಿ.ಇ. ಸದರಿ ಕಾಲೇಜಿನ ಬಿ.ಇಡಿ. ಕೋರ್ಸಿಗೆ 2007–08ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ ಬಿ.ಇಡಿ. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 05 ಯುಎಸ್‌ವಿ 2008, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2008**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ. ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿವಮೊಗ್ಗ ಜಿಲ್ಲೆ ಭದ್ರಾವತಿಯ ಶ್ರೀ ಹೆಬ್ಬೂರು ಚಾರಿಟಬಲ್ ಟ್ರಸ್ಟ್ (ರಿ)ನ ಡಿ.ಕೆ. ಶಿವಕುಮಾರ್, ಬಿ.ಇಡಿ. ಕಾಲೇಜಿಗೆ 2007–08ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 316

**ಬಿ.ಎಸ್. ಜಾಪಾಲಿ**

ಸರ್ಕಾರದ ಉಪ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ಶಿಕ್ಷಣ ಸಚಿವಾಲಯ**

**ವಿಷಯ :** ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಪರಿಷ್ಕರಣೆ – ಕೆಲವು ವೃಂದಗಳ ಬದಲಿ ಪದನಾಮೀಕರಣ ಆದೇಶ.

**ಓದಲಾಗಿದೆ :** ಸಾರ್ವಜನಿಕ ಇಲಾಖೆಯ ಆಯುಕ್ತರ ಪತ್ರ ಸಂಖ್ಯೆ: ಸಿ1(3)(1) ವೃನೇನಿ ಸಪ/2001 (ಭಾಗ–2) ದಿ: 9–1–2008.

**ಪ್ರಸ್ತಾವನೆ :**

ದಿ: 3–1–2008ರಂದು ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಕರಡು ಪರಿಶೀಲನಾ ಸಭೆಯಲ್ಲಿ ಕಾರ್ಯದರ್ಶಿಗಳು ಕರಡು ಪ್ರಸ್ತಾವನೆ ಭಾಗ 1 ರಿಂದ ಭಾಗ 6ರವರೆಗಿನ ಹುದ್ದೆಗಳಿಗೆ ಸಂಬಂಧಿಸಿದಂತೆ ಹುದ್ದೆ ಮತ್ತು ಪುನರ್ ಪದನಾಮೀಕರಣಕ್ಕಾಗಿ ಒಟ್ಟಾರೆಯಾಗಿ ಪ್ರಸ್ತಾಪ ಸಲ್ಲಿಸುವಂತೆ ಸೂಚಿಸಿರುವ ಮೇರೆಗೆ, ಆಯುಕ್ತರು ದಿ: 9–1–2008ರ ಪತ್ರದ ಜೊತೆಗೆ ಹುದ್ದೆಗಳ ಮರು ಪದನಾಮಕರಣಕ್ಕಾಗಿ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ. ಸಾರ್ವಜನಿಕ ಶಿಕ್ಷಣ

ಇಲಾಖೆ, ವೃಂದ ಮತ್ತು ನೇಮಕಾತಿ ನಿಯಮಗಳ ಸಮಗ್ರ ಪರಿಷ್ಕರಣೆ ಪ್ರಸ್ತಾವನೆಯಲ್ಲಿಯೂ ಈ ಹುದ್ದೆಗಳನ್ನು ಅಳವಡಿಸಲಾಗಿದೆಯೆಂದು ತಿಳಿಸಿದ್ದಾರೆ.

ಆಯುಕ್ತರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಈ ಎಲ್ಲಾ ಅಯುಕ್ತರು ಸೂಚಿಸಿರುವ ಹುದ್ದೆಗಳ ವೇತನ ಶ್ರೇಣಿಯಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ ಹಾಗೂ ಇದರಿಂದಾಗಿ ಸರ್ಕಾರಕ್ಕೆ ಯಾವುದೇ ಹೆಚ್ಚಿನ ಆರ್ಥಿಕ ಹೊರೆ ಇರುವುದಿಲ್ಲ. ಆಯಾ ಹುದ್ದೆಗಳಿಗೆ ಅನ್ವಯಿಸುವ ವೇತನ ಶ್ರೇಣಿಗಳಲ್ಲಿ ಯಾವುದೇ ಬದಲಾವಣೆ ಇಲ್ಲದೆ ಪ್ರಸ್ತುತ ವೇತನ ಶ್ರೇಣಿಯೇ ಮುಂದುವರೆಯುತ್ತದೆ. ಆದ್ದರಿಂದ ಆಯುಕ್ತರ ಪ್ರಸ್ತಾವನೆಯನ್ನು ಒಪ್ಪಿ ಸರ್ಕಾರ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 6 ಡಿಜಿಟಿ 2008, ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿನ ಈ ಕೆಳಕಂಡ ಹುದ್ದೆಗಳನ್ನು ಅವುಗಳ ಮುಂದೆ ತೋರಿಸಿರುವಂತೆ ಬದಲಿ ಪುನರ್ ಪದನಾಮೀಕರಿಸಿ ಆದೇಶಿಸಿದೆ.

**ಭಾಗ–1**

| ಕ್ರ. ಸಂ. | ಹಾಲಿ ಇರುವ ಹುದ್ದೆಯ ಪದನಾಮ ವೇತನ ಶ್ರೇಣಿ | ಬದಲಿ ಪದನಾಮೀಕರಿಸಿದ ಹುದ್ದೆ |
|---|---|---|
| 1 | ಹಿರಿಯ ಸಹಾಯಕ ನಿರ್ದೇಶಕರು, (ಕ್ರಾಫ್ಟ್)<br>ರೂ. 14050–25050 | ಹಿರಿಯ ಸಹಾಯಕ ನಿರ್ದೇಶಕರು (ವೃತ್ತಿ ಶಿಕ್ಷಣ) |
| 2 | ವಿಷಯ ಪರಿವೀಕ್ಷಕರು (ಕ್ರಾಫ್ಟ್),<br>ಜಿಲ್ಲಾ ಉಪ ನಿರ್ದೇಶಕರ ಕಛೇರಿ, (ಆಡಳಿತ) ಸಾಶಿ ಇಲಾಖೆ<br>ರೂ. 14050–25050 | ವಿಷಯ ಪರಿವೀಕ್ಷಕರು, (ವೃತ್ತಿ ಶಿಕ್ಷಣ) ಜಿಲ್ಲಾ ಉಪ ನಿರ್ದೇಶಕರ ಕಛೇರಿ (ಆಡಳಿತ) ಸಾಶಿ ಇಲಾಖೆ |
| 3 | ಜಿಲ್ಲಾಧಿಕಾರಿ,<br>ಕ್ರೀಡೆ ಮತ್ತು ದೈಹಿಕ ಶಿಕ್ಷಣ, ಜಿಲ್ಲಾ ಉಪ ನಿರ್ದೇಶಕರ ಕಛೇರಿ, ಸಾಶಿಇ<br>ರೂ. 14050–25020 | ದೈಹಿಕ ಶಿಕ್ಷಣ ಅಧಿಕಾರಿ (ಆಡಳಿತ), ಜಿಲ್ಲಾ ಉಪ ನಿರ್ದೇಶಕರ ಕಛೇರಿ, ಸಾಶಿಇ |
| 4 | ಕ್ಷೇತ್ರಾಧಿಕಾರಿ,<br>ಕ್ರೀಡೆ ಮತ್ತು ದೈಹಿಕ ಶಿಕ್ಷಣ, ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ<br>ರೂ. 11400–21600 | ದೈಹಿಕ ಶಿಕ್ಷಣ ನಿರೀಕ್ಷಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ |
| 5 | ಸಂಸ್ಕೃತ ಶಾಲೆಗಳ ನಿರೀಕ್ಷಕರು ವಿಭಾಗ ಜಂಟಿ ನಿರ್ದೇಶಕರ ಕಛೇರಿ<br>ರೂ. 11400–21600 | ವಿಷಯ ನಿರೀಕ್ಷಕರು (ಸಂಸ್ಕೃತ) |

**ಭಾಗ–2**

| | | |
|---|---|---|
| 1 | ಪದವೀಯೇತರ ಮುಖ್ಯ ಶಿಕ್ಷಕರು/ ಮುಖ್ಯ ಶಿಕ್ಷಕಿಯರು,<br>ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆಗಳು<br>ರೂ. 8825–16000 | ಹಿರಿಯ ಮುಖ್ಯ ಶಿಕ್ಷಕರು/ ಮುಖ್ಯ ಶಿಕ್ಷಕಿಯರು, ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆಗಳು |

**ಭಾಗ–3**

| | | |
|---|---|---|
| 1 | ಕ್ರಾಫ್ಟ್ ಶಿಕ್ಷಕರು ಗ್ರೇಡ್–1,<br>ಸರ್ಕಾರಿ ಪ್ರೌಢಶಾಲೆಗಳು, ಸಪಪೂಕಾ (ಪ್ರೌಢಶಾಲೆ ವಿಭಾಗ), ಸಂಯುಕ್ತ ಪ್ರೌಢಶಾಲೆಗಳು ಮತ್ತು ಶಿಕ್ಷಕರ ಶಿಕ್ಷಣ ಸಂಸ್ಥೆಗಳು<br>ರೂ. 8000–14800 | ವೃತ್ತಿ ಶಿಕ್ಷಣ ಶಿಕ್ಷಕರು ಗ್ರೇಡ್–1, ಸರ್ಕಾರಿ ಪ್ರೌಢಶಾಲೆಗಳು, ಸಪಪೂಕಾ (ಪ್ರೌಢಶಾಲೆ ವಿಭಾಗ) ಸಂಯುಕ್ತ ಪ್ರೌಢಶಾಲೆಗಳು ಮತ್ತು ಶಿಕ್ಷಕರ ಶಿಕ್ಷಣ ಸಂಸ್ಥೆಗಳು |
| 2 | ಶಿಕ್ಷಣ ಸಹಾಯಕ (ಕ್ರಾಫ್ಟ್) ಸಾಶಿಇ, ಆಯುಕ್ತರ ಕಛೇರಿ, ಬೆಂಗಳೂರು<br>ರೂ. 8000–14800 | ಶಿಕ್ಷಣ ಸಹಾಯಕ (ವೃತ್ತಿ ಶಿಕ್ಷಣ), ಸಾಶಿಇ, ಆಯುಕ್ತರ ಕಛೇರಿ, ಬೆಂಗಳೂರು |
| 3 | ಕ್ರಾಫ್ಟ್ ಶಿಕ್ಷಕರು ಗ್ರೇಡ್–2, ಸಪ್ರೌಶಾ, ಸಪಪೂಕಾ, (ಪ್ರೌಢಶಾಲಾ ವಿಭಾಗ) ಸಂಯುಕ್ತ ಪ್ರೌಢಶಾಲೆಗಳು ಮತ್ತು ಶಿಕ್ಷಕರ ಶಿಕ್ಷಣ ಸಂಸ್ಥೆಗಳು<br>ರೂ. 8000–14800 | ವೃತ್ತಿ ಶಿಕ್ಷಣ ಶಿಕ್ಷಕರು ಗ್ರೇಡ್–2, ಸಪ್ರೌಶಾ, ಸಪಪೂಕಾ (ಪ್ರೌಢಶಾಲಾ ವಿಭಾಗ) ಸಂಯುಕ್ತ ಪ್ರೌಢಶಾಲೆಗಳು ಮತ್ತು ಶಿಕ್ಷಕರ ಶಿಕ್ಷಣ ಸಂಸ್ಥೆಗಳು |

**ಭಾಗ–4**

| | | |
|---|---|---|
| 1 | ಗುಮಾಸ್ತೆ ಕಂ ಬೆರಳಚ್ಚುಗಾರರು<br>ರೂ. 5800–10500 | ಡಾಟಾ ಎಂಟ್ರಿ ಆಪರೇಟರ್ಸ್ |

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 347

**ಎಂ.ಎಂ. ಹಿರೇಮಠ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು 1&2)

**ಸಹಕಾರ ಸಚಿವಾಲಯ**

**ವಿಷಯ :** ಕಲಘಟಗಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ/38/ಎಂಎಂಡಿ/1986, ದಿನಾಂಕ 20–6–1992 ಮತ್ತು ತಿದ್ದುಪಡಿ ಸಂಖ್ಯೆ: ಸಿಎಂಡಬ್ಲ್ಯೂ/133/ಎಂಆರ್‌ಇ/1997, ದಿನಾಂಕ 16–12–1997.
2) ಸರ್ಕಾರದ ಆದೇಶ ಸಂಖ್ಯೆ: ಸಇ/293/ಮಾಇಸೇ/2006, ದಿನಾಂಕ 6–12–2006.
3) ಹೆಚ್ಚುವರಿ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕೃಮಾಇ/86/ಸಿಬ್ಬಂದಿ–1(ಸಿ)/2004, ದಿನಾಂಕ 6–8–2007.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಆದೇಶದಲ್ಲಿ ಕಲಘಟಗಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 5 ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ತದನಂತರ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ. ಮೇಲೆ ಓದಲಾದ (2)ರಲ್ಲಿನ ದಿನಾಂಕ 6–12–2006ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ 19–6–2007ರ ವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಈ ಹುದ್ದೆಗಳನ್ನು ದಿನಾಂಕ 20–6–2007ರಿಂದ ಖಾಯಂಗೊಳಿಸಲು ಅಥವಾ ಮುಂದಿನ 2 ವರ್ಷಗಳ ಅವಧಿಗೆ ಮುಂದುವರಿಸಲು ಕೃಷಿ ಮಾರಾಟ ಇಲಾಖೆಯ ಹೆಚ್ಚುವರಿ ನಿರ್ದೇಶಕರು, ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 170 ಮಾಇಸೇ 2007, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕಲಘಟಗಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ 20–6–2007ರಿಂದ 19–6–2008ರವರೆಗೆ ಒಂದು ವರ್ಷದ ಅವಧಿಗೆ ಮುಂದುವರಿಸಿದೆ.

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಯದರ್ಶಿ | 1 |
| 2 | ಸಹಾಯಕ ಕಾರ್ಯದರ್ಶಿ | 1 |
| 3 | ಲೆಕ್ಕಿಗ | 1 |
| 4 | ಆಂತರಿಕ ಲೆಕ್ಕ ಪರಿಶೋಧಕರು | 1 |
| 5 | ಬೆರಳಚ್ಚುಗಾರರು | 1 |
| | **ಒಟ್ಟು** | **5** |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ ಸಂಖ್ಯೆ: "3475–ಇತರೆ ಸಾಮಾನ್ಯ ಆರ್ಥಿಕ ಸೇವೆಗಳು 107–ಮಾರುಕಟ್ಟೆ ಕ್ರಮಪಡಿಸುವಿಕೆ–02 ಮಾರುಕಟ್ಟೆ ಸಮಿತಿಗಳು (ಯೋಜನೇತರ)" ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: 1/ಟಿಎಫ್‌ಪಿ/1996 ದಿನಾಂಕ 10–7–1996ರಲ್ಲಿ ಆರ್ಥಿಕ ಇಲಾಖೆಯು ಇಲಾಖಾ ಕಾರ್ಯದರ್ಶಿಗಳಿಗೆ ನೀಡಲಾಗಿರುವ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 130

**ಸಿ.ಕೆ. ವಾಸುದೇವ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ